# ಸಂಕಲ್ಪ ಸೂರ್ಯೋದಯು.



ಸಂಸ್ಕೃತ ನಾಟಕದ ಕನ್ನಡ ಭಾಷಾನುವಾದ

ಪ್ರಥಮಾಂಕ.

---


ಮೈಸೂರು ಶ್ರೀಮನ್ಮಹಾರಾಜರವರ ಸಂಸ್ಕೃತ

ಮಹಾಪಾಠಶಾಲೆಯ ಲೈಬ್ರೆರಿ ಪಂಡಿತರಾದ ವ್ಯಾಕರಣವಿದ್ವಾನ್

ಎಂ. ಕೆ. ಶ್ರೀನಿವಾಸರಾಘವಾಚಾರ್ಯರಿಂದ


ಕನ್ನಡಿಸಲ್ಪಟ್ಟು

ಪ್ರಚುರಗೊಳಿಸಲ್ಪಟ್ಟಿತು.




MYSORE:

PRINTED AT THE K. V. V. PRESS

1921.

# ಪೀಠಿಕೆ.

---

ಈ ಸಂಕಲ್ಪ ಸೂರ್ಯೋದಯವು ವೈರಾಗ್ಯನಿಧಿಗಳಾಗಿಯೂ, ಸರ್ವತಂತ್ರಸ್ವತಂತ್ರರಾಗಿಯೂ, ಕವಿತಾರ್ಕಿಕಸಿಂಹರಾಗಿಯೂ ಇರುವ ಶ್ರೀಮಾನ್ ವೇದಾಂತಾಚಾರ್ಯರಿಂದ ಲೋಕೋಪಕಾರಕ್ಕಾಗಿ ರಚಿತವಾಗಿರುವುದು. ಇದರಲ್ಲಿ ಮನುಷ್ಯಜನ್ಮವನ್ನು ಪಡೆದವನು ತನ್ನ ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳುವುದಕ್ಕೆ ಬೇಕಾದ ಸಕಲ ವಿಷಯಗಳೂ ಅಡಕವಾರುವುವು. ಈ ಒಂದು ನಾಟಕವನ್ನು ಓದಿದ ಮಾತ್ರದಿಂದಲೇ ಸಕಲ ಶಾಸ್ತ್ರಸಾರವೂ ಮಾನವನ ಹೃದಯದಲ್ಲಿ ಅಂಕಿತವಾಗುವುದು. ವೇದಾಂತ ಪ್ರತಿಪಾದ್ಯನಾದ ಸರ್ವೇಶ್ವರನ ಸ್ವರೂಪವೂ, ಅವನನ್ನು ಅರಿತುಕೊಳ್ಳುವ ಉಪಾಯವೂ, ಸಂಸಾರದ ನಿಸ್ಸಾರತೆಯೂ, ಕಾಮಾದ್ಯರಿಷಡ್ವರ್ಗಗಳ ದೌರಾತ್ಮ್ಯವೂ, ಅದನ್ನು ನಿಗ್ರಹಿಸುವ ಉಪಾಯವೂ, ವಿವೇಕದ ಮಹಿಮೆಯೂ, ಯೋಗಸಿದ್ಧಿಯ ಕ್ರಮವೂ, ಭಗವದ್ಧ್ಯಾನದ ಪಕ್ವದೆಶೆಯೂ, ಭಕ್ತಿಯ ಮಹಿಮೆಯೂ, ಭಗವತ್ಸಂಕಲ್ಪದ ಆವಿರ್ಭಾವ ಕ್ರಮವೂ, ಸಂಸಾರ ಮೋಕ್ಷವೂ, ಇವುಗಳೆಲ್ಲವೂ ಬಹು ಸುಲಭ ಶೈಲಿಯಿಂದ ವರ್ಣಿತವಾಗಿರುವ ಕಾರಣ ಸಕಲ ಸಂಸಾರಿ ಜನಗಳೂ ಮನನ ಮಾಡುವುದಕ್ಕೆ ಯೋಗ್ಯವಾಗಿರುವುದು.

ಇಂತಹ ಅದ್ಭುತವಾದ ಗ್ರಂಥವು ಸಂಸ್ಕೃತವಾಙ್ಮಯವಾಗಿರುವುದ್ದರಿಂದ ಸರ್ವರಿಗೂ ತಿಳಿಯಲವಕಾಶವಿಲ್ಲದೆ ಇರುವುದನ್ನು ಯೋಚಿಸಿ, ಕನ್ನಡ ಭಾಷೆಯಲ್ಲಿ ಅನುವಾದ ಮಾಡಿ ಸಕಲರಿಗೂ ತಿಳಿಯುವಂತೆ ಮಾಡಬೇಕೆಂಬ ಕುತೋಹಲದಿಂದ ಈ ಮಹಾ ಕಾರ್ಯಕ್ಕೆ ಪ್ರಯತ್ನ ಪಟ್ಟೆನು. ಆಚಾರ್ಯಾನುಗ್ರಹದಿಂದ ಪೂರ್ತಿಯಾಗಿರುವುದು. ಅದರಲ್ಲಿ ಪ್ರಥಮಾಂಕವನ್ನು ಮಾತ್ರ ಮುದ್ರಿಸಿ ಪ್ರಚುರಪಡಿಸಿರುವೆನು. ಮಹನೀಯರುಗಳು ವಿಷಯಗೌರವದಲ್ಲಿಯೂ, ಶ್ರೀಮದಾಚಾರ್ಯನಿಷ್ಠೆಯಲ್ಲಿಯೂ ದೃಷ್ಟಿ ಇಟ್ಟು ಇದನ್ನು ಪರಿಗ್ರಹಿಸುವುದರ ಮೂಲಕ ಗ್ರಂಥಕರ್ತನ ಶ್ರಮವನ್ನು ಸಾರ್ಥಕಗೊಳಿಸಬೇಕೆಂದು ಪ್ರಾರ್ಥಿಸುತ್ತೇನೆ.

ಕೂಡಲೆ ದ್ವಿತಿಯಾಂಕವನ್ನು ಮುದ್ರಿಸಿ ಪ್ರಚುರ ಪಡಿಸುತ್ತೇನೆ.

ವ್ಯಾಕರಣ ವಿದ್ವಾನ್,

ಎಂ. ಕೆ. ಶ್ರೀನಿವಾಸರಾಘವಾಚಾರ್ಯ.



# ಸಂಕಲ್ಪಸೂರ್ಯೋದಯ






## ಪ್ರಥಮಾಂಕ.

ಶ್ರೀಮನ್ನಾರಾಯಣನು ಸಮಸ್ತ ವಿಪತ್ತುಗಳನ್ನೂ ಪರಿಹರಿಸಲಿ. ಆ ನಾರಾಯಣನಲ್ಲಿ ಭಕ್ತಿಯು ವೃದ್ಧಿಯಾದರೆ, ಅವನ ಸಂಕಲ್ಪವು ಉದಯಿಸಿ, ಪ್ರಾತಃಕಾಲದಲ್ಲಿ ಸೂರ್ಯನು ದೃಷ್ಟಿಗೋಚರನಾಗುವಂತೆ ಜೀವಾತ್ಮನ ಜ್ಞಾನಕ್ಕೆ ಗೋಚರವಾಗಿ, ಸಂಸಾರವೆಂಬ ರಾತ್ರಿಯನ್ನು ಪ್ರಾರಬ್ಧ ಕರ್ಮಾವಸಾನದಲ್ಲಿಯೇ ಹೋಗಲಾಡಿಸುವುದು. ಆ ನಾರಾಯಣನಿಗೆ ಪಂಚವಿಂಶತಿ ತತ್ವಗಳು ಆಯುಧಗಳಾಗಿಯೂ, ಭೂಷಣಗಳಾಗಿಯೂ ಇರುವುವು. ಆ ನಾರಾಯಣನು ಜ್ಞಾನಶಕ್ತ್ಯಾದಿ ಸಕಲ ಕಲ್ಯಾಣಗುಣಗಳಿಂದ ಪ್ರಕಾಶಿಸುತ್ತಿರುವನು.

ಅಂತಹ ಭಗವಂತನನ್ನು ಹೊಂದುವುದಕ್ಕೆ ಭಕ್ತಿಯು ಉಪಾಯವಾಗಿರುವುದಲ್ಲದೆ, ಪ್ರಪತ್ತಿಯೂ ಸಹ ಉಪಾಯವಾಗಿರುವುದು. ಸಾತ್ವಿಕರಿಂದ ಪ್ರಣವವೆಂಬ ಧನಸ್ಸಿನಲ್ಲಿ ಆತ್ಮನೆಂಬ ಬಾಣವನ್ನು ಹೂಡಿ, ಎದೆಗೆ ಗುರಿಯಿಟ್ಟು ಪ್ರಯೋಗಿಸಿದಂತೆ ಕೌಸ್ತುಭಮಣಿಯು ಶ್ರೀಮನ್ನಾರಾಯಣನ ವಕ್ಷಸ್ಥಳದಲ್ಲಿ ಪ್ರಕಾಶಿಸುತ್ತಲಿರುವುದು. ಅಂದರೆ ತದೇಕಧ್ಯಾನದಿಂದ ಭಗವಂತನಲ್ಲಿ ಜೀವಾತ್ಮನನ್ನು ಪ್ರಣವೋಚ್ಚಾರಣಪುರಸ್ಸರವಾಗಿ ಸಮರ್ಪಿಸುವುದೇ ಪ್ರಪತ್ತಿಯು. ಇಂತಹ ಪ್ರಪತ್ತಿಗೆ ವಿಷಯಭೂತನಾದ ಲಕ್ಷ್ಮೀಪತಿಯಾದ ನಾರಾಯಣನು ಸಂಪತ್ತನ್ನುಂಟುಮಾಡಲಿ.

ಸೂತ್ರಧಾರ—(ಪ್ರವೇಶಿಸಿ) ಸಮಸ್ತ ಸುರಾಸುರರ ಕಿರೀಟಮಣಿಗಣಗಳಿಂದ ಅಲಂಕೃತವಾದ ಪಾದಪೀಠವುಳ್ಳವನಾಗಿಯೂ, ಶರಣಾಗತರನ್ನು ಕಾಪಾಡುವುದರಲ್ಲಿ ಬದ್ಧದೀಕ್ಷನಾಗಿಯೂ, ಲಕ್ಷ್ಮೀಪತಿಯಾಗಿಯೂ, ಬೆಂಕಿಯ ತಾಪವನ್ನು ಮೇಘವು ಹೋಗಲಾಡಿಸು

ವಂತೆ ಸಂಸಾರತಾಪವನ್ನು ಹೋಗಲಾಡಿಸತಕ್ಕವನಾಗಿಯೂ ಇ
ರುವ ಸರ್ವೇಶ್ವರನಾದ ಭಗವಂತನ ದರ್ಶನಕ್ಕಾಗಿ ಶ್ರೀರಂಗ, ವೇಂ
ಕಟಾದ್ರಿ, ಸತ್ಯವ್ರತ, ಯದುಗಿರಿ, ಪುರುಷೋತ್ತಮ, ಪಾಂಡು
ರಂಗ, ಮೊದಲಾದ ಸ್ವಯಂ ವ್ಯಕ್ತಕ್ಷೇತ್ರಗಳಲ್ಲಿ ನಡೆಯುವ ಉತ್ಸ
ವಗಳಲ್ಲಿ ಹೋಗಿಬರುತ್ತಾ, ತಮ್ಮ ಪಾದಧೂಳಿಗಳಿಂದ ಭೂಮಿ
ಯನ್ನು ಪವಿತ್ರವನ್ನಾಗಿ ಮಾಡುತ್ತಲಿರುವ, ನಿರ್ವ್ಯಾಜವಾಗಿ ಶ್ರೀ
ರಂಗಕ್ಕೆ ದಯಮಾಡಿ, ಶೇಷ, ಶೇಷಾಶನ, ಗರುಡ ಮೊದಲಾದ ನಿತ್ಯ
ಸೂರಿಗಳಂತೆ ಜಗತ್ಪೂಜ್ಯರಾಗಿಯೂ, ದೋಷರಹಿತರಾಗಿಯೂ,
ವಂಶ, ವಿದ್ಯೆ, ತದುಚಿತವಾದ ಆಚಾರ, ಶೀಲ, ಇವುಗಳಿಂದ ಪ್ರಕಾ
ಶಮಾನರಾಗಿಯೂ, ಅನಾದಿಯಾದ ಮಾಯೆಯೆಂಬ ಸುಳಿಯಲ್ಲಿ ಬಿ
ದ್ದು ಭ್ರಾಂತರಾಗಿರುವ ಕುದೃಷ್ಟಿಗಳೆಂಬ ಬಾಳೆಯ ವನಕ್ಕೆ ಮ
ತ್ತಗಜರಾಗಿಯೂ ಮುಮುಕ್ಷುಗಳಾಗಿ ಉಪನಿಷದ್ರಹಸ್ಯವನ್ನು ಅರಿ
ತು ಸಮಸ್ತ ಶಾಸ್ತ್ರಪಾರೀಣರಾಗಿಯೂ, ಪೂಜ್ಯರಾಗಿಯೂ ಇರು
ವ ಸಭಾಸದರಿಂದ ಆಜ್ಞಾಪಿಸಲ್ಪಟ್ಟಿರುವೆನು. ಏನೆಂದರೆ "ಎಲೈ
ವೈಕುಂಠವಿನೋದಿಯೇ, ಶೃಂಗಾರಾದಿ ವೇಷಗಳನ್ನು ಧರಿಸಿ, ಶಾಂ
ತಿರಸವು ಪ್ರಧಾನವಾಗಿ ಸ್ಥಾಯಿಭಾವದಲ್ಲಿ ನಿಲ್ಲುವ ನಾಟಕವನ್ನು
ವಿವೇಕ, ಮೋಹ ಮೊದಲಾದ ಮನುಷ್ಯರ ಗುಣಗಳನ್ನೇ ಪಾತ್ರ
ಗಳನ್ನಾಗಿಟ್ಟುಕೊಂಡು ಅಭಿನಯಿಸಿ, ತ್ರಿವರ್ಗನಿಷ್ಠರಾದ ಸಾಧುಗ
ಳಿಗೆ ಸಂತೋಷವನ್ನುಂಟುಮಾಡು" ಎಂದು ಭರತಮತೋಪಾ
ಧ್ಯಾಯನಾದ ಸನ್ಮಾರ್ಗವರ್ಧನನ ಶಿಷ್ಯನಾಗಿ, ಸಂತೋಷಪಾಲ
ಕನೆಂಬ ಶೈಲೂಷ ಚಕ್ರವರ್ತಿಯ ಮಗನಾದ ಪ್ರತಿಭಟರೆಂಬ ಆನೆ
ಗೆ ಸಿಂಹನಂತಿರುವ ನಾನೂ ಕೂಡ ಪ್ರತಿಜ್ಞಾಪುರಸ್ಸರವಾಗಿ ವಿ
ದ್ವಾಂಸರ ಆಜ್ಞೆಯನ್ನು ಪರಿಗ್ರಹಿಸಿರುವೆನು. ಪಂಡಿತರಾದ ಸಾಮಾ
ಜಿಕರುಗಳು ದಿವ್ಯಪ್ರಯೋಗವನ್ನು ನೋಡಲಪೇಕ್ಷೆಯಿಂದ ಅವ
ಕಾಶವನ್ನು ತೆಗೆದುಕೊಂಡು ಬಂದು ಸೇರಿರುವರು. ಇವರುಗಳು
ಆಂಗಿಕಾದಿ ಚತುರ್ವಿಧ ಅಭಿನಯದಿಂದ ಧೀರೋದಾತ್ತರೇ ಮೊದ
ಲಾದವರ ಅವಸ್ಥೆಯನ್ನು ತೋರ್ಪಡಿಸುವ ನಾಟ್ಯದಲ್ಲಿಯೂ ತಾಳ

ಲಯಗಳಿಂದ ಕೂಡಿ, ಅಂಗವಿಕ್ಷೇಪ ಮಾತ್ರದಲ್ಲಿ ಪರ್ಯವಸಿತವಾದ ದೇಶೀನೃತ್ತದಲ್ಲಿಯೂ, ಭಾವವನ್ನೊಳಗೊಂಡು ಅಭಿನಯಪ್ರಚುರವಾದ ಮಾರ್ಗನೃತ್ತದಲ್ಲಿಯೂ, ವಿಶೇಷ ಪರಿಚಯವುಳ್ಳವರಾಗಿರುವರಲ್ಲದೆ, ಲಕ್ಷಣರಹಿತವಾದ ನೃತ್ತಗಳನ್ನು ನೋಡುವುದರಲ್ಲಿ ಜಿಹಾಸೆಯುಳ್ಳವರಾಗಿರುವರು. ಭರತಶಾಸ್ತ್ರಾಧಿದೇವತೆಗಳಂತೆಯೇ ಪ್ರಕಾಶಿಸುತ್ತಲಿರುವರು. ಆದ್ದರಿಂದ ನಾನು ಪ್ರಥಮದಲ್ಲಿ ಆದಿದೇವನಾದ ಹಯಗ್ರೀವನನ್ನು ಪ್ರಾರ್ಥಿಸುವೆನು. ಈ ಹಯಗ್ರೀವಮೂರ್ತಿಯು ಸಮಸ್ತ ವಿದ್ಯಾಸಂಪ್ರದಾಯ ಪ್ರವರ್ತಕನಾಗಿಯೂ ಆಯಾಯ ವಿದ್ಯೆಗೋಸ್ಕರವಾಗಿ ಆಯಾಯ ಅವತಾರಗಳನ್ನು ಪರಿಗ್ರಹಿಸಿದಾಗ್ಯೂ, ಅಪ್ರತಿಹತವಾದ ಉತ್ಕರ್ಷವನ್ನು ಹೊಂದಿ ಅಜ್ಞಾನವನ್ನು ಹೋಗಲಾಡಿಸಿ, ಅನ್ಯದೇವತಾಭಕ್ತಿಯನ್ನು ನಾಶಮಾಡಿ, ಉಪಾಸಕರ ಅಭೀಷ್ಟವನ್ನು ಕೊಡುತ್ತಲಿರುವನು. ಒಳಗಿರುವ ಅಜ್ಞಾನವೆಂಬ ರಾತ್ರಿಗೆ ಪ್ರಭಾತಪ್ರಾಯನಾಗಿಯೂ, ಜ್ಞಾನದೃಷ್ಟಿಗೆ ಅಪೂರ್ವವಾದ ದಿವ್ಯಾಂಜನವಾಗಿಯೂ, ವಾಗೀಶನೆಂಬ ಹೆಸರುಳ್ಳವನಾಗಿಯೂ, ವೇದೋಪದೇಶಕನಾಗಿಯೂ ಇರುವ ಹಯಗ್ರೀವನೆಂಬ ವಾಸುದೇವಮೂರ್ತಿಯು ನನ್ನ ಹೃದಯದಲ್ಲಿ ಪ್ರಕಾಶಿಸಲಿ. (ಕೈಮುಗಿದುಕೊಂಡು) ರಂಗಧಾಮದಲ್ಲಿ ಅತಿಶಯವಾದ ಪ್ರೀತಿಯುಳ್ಳ ಭಾವುಕ ಜನಗಳಿಂದ ಪ್ರತ್ಯಕ್ಷೀಕೃತನಾಗಿ ಹತ್ತು ವಿಧವಾದ ಭೂಮಿಕೆಗಳನ್ನು ಪರಿಗ್ರಹಿಸುವ ದೇವನು ಮಂಗಳವನ್ನುಂಟುಮಾಡಲಿ. ಅವನ ಬೇರೆ ಬೇರೆಯಾದ ಭಾವಗಳಲ್ಲಿ ಅದಕ್ಕನುಗುಣವಾದ ಭಾವಗಳನ್ನು ತಾನೂ ಧರಿಸುತ್ತಾ, ಶ್ರೀ ಮಹಾಲಕ್ಷ್ಮಿಯೂ ಕೂಡ ನಾನಾಕಾರವುಳ್ಳವಳಾಗಿ ಸಹಧರ್ಮಿಣಿಯಾಗಿ ವಿಹರಿಸುತ್ತಿರುವಳು. (ಹಾಗೆಯೇ ಸ್ವಲ್ಪ ಧ್ಯಾನಿಸಿ, ಬಹಳ ಸಂತೋಷದಿಂದ) ನಾನು ಈಗ ಸರ್ವ ಸಂರಕ್ಷಕನಾದ ಪರಮಪುರುಷನ ಕೃಪಾಕಟಾಕ್ಷಕ್ಕೆ ಪಾತ್ರನಾದೆನು. ವೇದಾಂತ ಪರಿಶೀಲನವನ್ನು ಮಾಡಿರುವ ಬುದ್ಧಿಯಿಂದ ಮನೋಹರವಾಗಿರುವ ನಾಟಕ ಮಾರ್ಗವನ್ನು ಆಲೋಚನೆ ಮಾಡಿ, ವಿವೇಕವನ್ನೇ ಪ್ರ

ಧಾನವಾಗಿಟ್ಟು, ಶ್ರೀ ಭಾಷ್ಯಕಾರ ಯಾಮುನ ನಾಥಮುನಿ ಶಠರಿ ಪು ಬೋಧಾಯನಾದಿಗಳ ಸಿದ್ಧಾಂತವನ್ನು ಪ್ರಕಾಶಪಡಿಸುವೆನು. (ತೆರೆಯ ಕಡೆ ತಿರುಗಿ) ಆರ್ಯಳೆ, ಈ ರಂಗಭೂಮಿಯನ್ನು ಆದರಿಸು.

(ನಟಿಯು ಪ್ರವೇಶಿಸುವಳು.)

ನಟಿ—ತಮ್ಮ ಆಜ್ಞೆಯನ್ನು ಪ್ರೀತಿಯಿಂದ ಅಪೇಕ್ಷಿಸುತ್ತಿರುವ ದಾಸಿಗೆ ಏನಪ್ಪಣೆ ?

ಸೂತ್ರಧಾರ—ಸಾತ್ವಿಕರಾದ ಸಾಮಾಜಿಕರ ಅಪ್ಪಣೆಯನ್ನನುಸರಿಸಿ, ನಾಟಕವನ್ನಭಿನಯಿಸುವುದಕ್ಕೆ ಯೋಗ್ಯವಾದ ವೇಷಗ್ರಹಣದಲ್ಲಿ ನಮ್ಮ ಪಾತ್ರವರ್ಗವು ಕುಶಲವಾಗಿರುವುದೇ ?

ನಟಿ—ಆರ್ಯನೇ, ಇವರೆಲ್ಲರೂ ನಿಮ್ಮ ಕೈಕಾಲುಗಳಂತಿರುವರು. ನಿಮ್ಮ ಅಪೇಕ್ಷೆಯಲ್ಲಿ ಇವರು ಹೇಗೆ ಸಿದ್ಧರಾಗಿರುವುದಿಲ್ಲ ? ಆದರೆ ಯಾವ ನಾಟಕವನ್ನು ಅಭಿನಯಿಸುವುದಕ್ಕೆ ಆರಂಭಿಸಬೇಕೆಂಬುದನ್ನ ತಿಳಿಯಲಪೇಕ್ಷಿಸುತ್ತೇನೆ.

ಸೂತ್ರಧಾರ—ಆರ್ಯಳೇ, ವಿವೇಕನೇ ಕಥಾನಾಯಕನಾಗಿವುಳ್ಳ ಸಂಕಲ್ಪ ಸೂರ್ಯೋದಯವೆಂಬ ಅಭಿನವ ನಾಟಕವನ್ನರಿಯೆಯಾ ? ಈ ನಾಟಕದಲ್ಲಿ ಜೀವಾತ್ಮರುಗಳ ಲಕ್ಷಣವನ್ನು ಅರಿತಿರುವ ಜ್ಞಾನಿಗಳು ಅಪೂರ್ವನಿರ್ಮಾಣ ಚಾತುರ್ಯವುಳ್ಳ ಭಾವವನ್ನು ತಿಳಿಯುತ್ತಾರೆ. ಜೀವಾತ್ಮನ ಸದ್ಗುಣ ದುರ್ಗುಣಗಳಾದ ವಿವೇಕ ಮೋಹಾದಿಗಳು ತಮ್ಮ ಅಧಿದೇವತೆಗಳೊಂದಿಗೆ ಪಾತ್ರಗಳಾಗಿವೆ. ಮತ್ತು ಈ ನಾಟಕವು ಆಶ್ಚರ್ಯಕರವಾಗಿರುವುದು. ವಿವೇಕನ ಪಾಗಲ್ಭ್ಯದಿಂದ ಧೀರೋದಾತ್ತನಾಯಕನ ಸಂಬಂಧವೂ, ಪರಮಾತ್ಮನಾದ ಶ್ರೀಮನ್ನಾರಾಯಣನ ಸಂಕಲ್ಪದಿಂದ ಜೀವಾತ್ಮರುಗಳಿಗೆ ಮೋಕ್ಷ ಸಂಪಾದನ ಪ್ರವೃತ್ತಿಯು ಪ್ರಕಟಿತವಾಗುವುದರಿಂದ ಧೀರೋದ್ಧತನಾಯಕನ ಸಂಬಂಧವೂ ಪ್ರಬುದ್ಧನಾದ ಜೀವಾತ್ಮನ ಸ್ಥಿತಿವರ್ಣನದಿಂದ ಧೀರಶಾಂತನಾಯಕನ ಸಂಬಂಧವೂ ತೋರುವುದರಿಂದ ಸಂಸಾರಿಗಳಿಗೂ, ಕೂಡ ಅಭಿಮತವಾದ ವಿಚಿತ್ರಪ್ರಯೋಗವಾಗಿರುವುದು. ಈ ಪ್ರಯೋಗದ ಅತಿಶಯಕ್ಕೆ ಅವಧಿಯೇ ಇಲ್ಲವು.

ಸಮುದ್ರದಲ್ಲಿ ಎಷ್ಟೋ ಶಂಖಗಳು ಇವೆ. ಅವುಗಳೆಲ್ಲವೂ ಪುರು ಷೋತ್ತಮನ ಪಾಣಿಪದ್ಮವನ್ನು ಅಲಂಕರಿಸುವ ಪಾಂಚಜನ್ಯವಾ ಗುವುದೇ ? ಲೋಕದಲ್ಲಿ ಥಳಥಳಿಸುವ ಅನೇಕ ರತ್ನಗಳು ಜನಗ ಳನ್ನು ಮೋಹಗೊಳಿಸುವಂತೆ ಇದ್ದಾಗ್ಯೂ, ಶ್ರೀವತ್ಸದ ಸಮೀಪ ದಲ್ಲಿ ದೀಪದ ಕಾಂತಿಯಂತೆ ಹೊಳೆಯುವ ಲಕ್ಷ್ಮೀವಿಲಾಸದರ್ಪ ಣವಾದ ಕೌಸ್ತುಭಮಣಿಯ ಮಹಿಮೆಯನ್ನು ಹೊಂದುವುವೇ ? ಈ ಪ್ರಯೋಗವನ್ನು ಕರುಣಾಶಾಲಿಯಾದ ವೇದಾಂತನಿಷ್ಣಾತನಾದ ಕವಿಯು ಹಿತಾಹಿತಗಳನ್ನು ವಿಭಾಗಿಸಿ, ಯಾವುದೋ ಒಂದನ್ನು ವ್ಯಾಜವಾಗಿಟ್ಟು, ಸಮಸ್ತ ಜನಸಂರಕ್ಷಣಾರ್ಥವಾಗಿ ಕಲ್ಪಿಸಿರು ವನು.

ನಟಿ—ಆರ್ಯನೇ, ಇವರ ಕವಿಯು ಯಾರು ? ಆ ಕವಿಯಲ್ಲಿರುವ ಗೌರವ ದಿಂದ ಈ ಸಭಿಕರು ನಮ್ಮಲ್ಲಿಯೂ ವಿಶೇಷವಾದ ವಿಶ್ವಾಸವುಳ್ಳವ ರಾಗಿರುವರಲ್ಲ !

ಸೂತ್ರಧಾರ—ಆರ್ಯಳೇ, ನೀನು ಕೇಳಲಿಲ್ಲವೋ ? ಈ ಕವಿಯು ಜಗ ತ್ಪೂಜ್ಯರಾದ ವಿಶ್ವಾಮಿತ್ರ ಗೋತ್ರಕ್ಕೆ ಅಲಂಕಾರಪ್ರಾಯರಾದ ವಿಶುದ್ಧವಿದ್ಯಾಸಂಪನ್ನರಾದ ಪುಂಡರೀಕಾಕ್ಷ ಸೋಮಯಾಜಿಗಳ ಮಕ್ಕಳಾದ ಅನಂತಸೂರಿಗಳ ಪುತ್ರನು. ಶ್ರೀರಂಗನಾಥ ಸ್ವಾಮಿ ಯ ದಿವ್ಯಾಜ್ಞೆಯಿಂದ ವೇದಾಂತಾಚಾರ್ಯನೆಂಬ ಹೆಸರನ್ನು ಪಡೆದಿ ರುವನು. ಇವನಿಗೆ ಕವಿತಾರ್ಕಿಕಸಿಂಹನೆಂದು ಪ್ರಸಿದ್ಧವಾದ ಬಿರು ದುಂಟು. ಇವನ ಶಿಷ್ಯರುಗಳು ಸಮಸ್ತ ದಿಕ್ಕುಗಳಲ್ಲಿಯೂ ಈ ತನ ಜಯಧ್ವಜವನ್ನು ಎತ್ತಿಕಟ್ಟಿರುವರು. ಸರ್ವತಂತ್ರಗಳ ಕ್ಷೋ ಭವನ್ನು ಶಮನಮಾಡುವುದರಲ್ಲಿ ಮಹಾಮತಿಯುಳ್ಳವನು. ಈ ಕವಿಗೆ ಶ್ರೀ ವೇಂಕಟನಾಥನೆಂದು ಹೆಸರು ಮತ್ತು ಕವಿತಾಸಾರ ಭವನ್ನು ಅರಿತಿರುವ ಸತ್ಪುರುಷರುಗಳು ಕಠಿನ ಸಂದರ್ಭಗಳಿಂದ ಕೂಡಿದ ಗೌಡೀರೀತಿಯಿಂದಲೂ, ಅತಿ ಕೋಮಲ ಶಬ್ದ ಸಂದರ್ಭ ಗಳಿಂದ ಕೂಡಿದ ಪಾಂಚಾಲೀ ರೀತಿಯಿಂದಲೂ, ಅತಿ ಕಠಿನಗಳಲ್ಲ ದೆಯೂ, ಕೋಮಲವಾಗಿಯೂ ಇರುವ ಶಬ್ದ ಸಂದರ್ಭಗಳಿಂದ

ಕೂಡಿದ ವೈದರ್ಭೀ ರೀತಿಯಿಂದಲೂ, ಸುಂದರವಾಗಿರುವ ಈ ಕ
ವಿಯು ಕವನಗಳನ್ನು ನಿತ್ಯವೂ ಪ್ರಶಂಸಿಸುತ್ತಲಿರುವರು. ಈ ಕ
ವಿಯು ದ್ವಿಜತ್ವ ಸಂಪಾದಕವಾದ ಗಾಯತ್ರಿಗೆ ಋಷಿಯಾದ, ಲೋ
ಕಕ್ಕೆ ಇನ್ನೊಂದು ಇಂದ್ರನನ್ನು ಸೃಷ್ಟಿಮಾಡುವುದರಲ್ಲಿಯೂ,
ಲೋಕದಲ್ಲಿ ಇಂದ್ರನೇ ಇಲ್ಲದಂತೆ ಮಾಡುವುದರಲ್ಲಿಯೂ ಸಮ
ರ್ಥನಾದ ವಿಶ್ವಾಮಿತ್ರನ ವಂಶದಲ್ಲಿ ಅವತರಿಸಿರುವನು. ಮತ್ತು
ಚತುರ್ಮುಖ ಬ್ರಹ್ಮನಿಂದ ಪೂಜಾರ್ಥವಾಗಿ ನಿರ್ಮಿಸಲ್ಪಟ್ಟ
ರಾಕ್ಷಸರನ್ನು ನಾದದಿಂದ ವಿತ್ರಾಸನ ಮಾಡುವ ವಿಷ್ಣುವಿನ ಘಂಟೆ
ಯೇ ಈ ಕವಿಯ ರೂಪದಿಂದ ಅವತರಿಸಿರುವುದೆಂದು ವಿದ್ವಾಂಸರು
ಗಳು ಅನೇಕ ಉಪಪತ್ತಿಗಳಿಂದ ಸ್ಥಿರಪಡಿಸಿರುವರು. ಆ ವೇಂಕ
ಟನಾಥ ಕವಿಯು ತನ್ನ ಇಪ್ಪತ್ತನೆಯ ವರ್ಷದಲ್ಲಿಯೇ ನಾನಾವಿಧ
ವಾದ ವಿದ್ಯೆಗಳಲ್ಲಿ ಪಾರಂಗತನಾಗಿ, ಆ ವಯಸ್ಸಿನೊಳಗೇನೇ
ಮೂವತ್ತಾವರ್ತಿ ಶ್ರೀ ಭಾಷ್ಯವನ್ನು ಶಿಷ್ಯರುಗಳಿಗೆ ಉಪದೇಶಿಸಿ,
ಜ್ಞಾನ, ಭಕ್ತಿ, ವೈರಾಗ್ಯ, ವಿದ್ಯಾ, ಸದಾಚಾರ ಸಂಪನ್ನನಾಗಿ ಶ್ರೀ
ರಂಗನಾಥ ಸ್ವಾಮಿಯ ಪ್ರೀತಿಗೋಸ್ಕರ ಶ್ರುತಿಹಿತವಾದ ಈ ಸಂಕ
ಲ್ಪಸೂರ್ಯೋದಯವೆಂಬ ನಾಟಕವನ್ನು ನಿರ್ಮಿಸಿದನು.

ನಟಿ—ಆರ್ಯನೇ, ಕೇವಲ ವೇದಾಂತಿಯಾಗಿ ತರ್ಕಶಾಸ್ತ್ರಾಭ್ಯಾಸದಿಂದ ಕ
ರ್ಕಶತರವಾದ ವಾಗ್ಜಾಲವುಳ್ಳ ಈ ಕವಿಯು ಲಲಿತವಾದ ನಾಟಕವ
ನ್ನು ಹೇಗೆ ಮಾಡಿದನು ?

ಸೂತ್ರಧಾರ—(ನಗುತ್ತಾ) ಆರ್ಯಳೇ, ವೇದಾಂತಿಗೆ ಕವಿತಾಶಕ್ತಿಯೂ,
ಕಠಿನವಾದ ವಾಗ್ಜಾಲವುಳ್ಳವನಿಗೆ ಲಲಿತವಾದ ಪ್ರಯೋಗರಚನೆಯೂ
ಹೇಗೆ ಎಂದು ಪ್ರಶ್ನೆಮಾಡುತ್ತೀಯಲ್ಲವೇ ? ಇದರಿಂದ ಈ ಕವಿ
ಯು ವೈಷಯಿಕ ವ್ಯಾಪಾರಗಳನ್ನು ತೊರೆದು, ಕೇವಲ ಬ್ರಹ್ಮಾ
ನುಭವದಲ್ಲಿಯೇ ನಿಮಗ್ನವಾದ ಮನಸ್ಸುಳ್ಳವನೆಂದು ನೀನು ತಿಳಿ
ದುಕೊಂಡಂತಾಯಿತು. ಆದರೂ ಹೇಳುವೆನು. ಮನು, ವ್ಯಾ
ಸ, ವಾಲ್ಮೀಕಿ ಮೊದಲಾದವರಿಗೆ ಅರ್ಹವಾದ ಅಮೃತಮಯವಾದ
ಈ ಸೂಕ್ತಿಯು ತಾನಾಗಿಯೇ ಪಂಗುವಿನ ಮೇಲೆ ಗಂಗೆಯು ಬಂ

ದುಬೀಳುವಂತೆ ಉದಯಿಸುವುದಾದರೆ, ಯಾರು ತಡೆಯುವರು ?
ಮತ್ತು ಕೇಳು. ಈಶ್ವರನ ಶಿರಸ್ಸನ್ನೂ ಕೂಡ ಅಲ್ಲಾಡಿಸುವಷ್ಟು
ಭಯಂಕರವಾಗಿ ತನ್ನ ಪ್ರವಾಹ ವೇಗದಿಂದ ಪರ್ವತಗಳನ್ನೂ
ಕೂಡ ಭೇದಿಸುವ ಗಂಗಾ ನದಿಯು ಭೂಮಿಯಲ್ಲಿ ಮಧುರವಾಗಿ
ಯೂ, ನಿರ್ಮಲವಾಗಿಯೂ, ಸುಂದರವಾಗಿಯೂ ಪ್ರವಹಿಸುವುದಿ
ಲ್ಲವೇ ?

ನಟ—(ಸಂತೋಷದಿಂದ) ತಾವು ಅಪ್ಪಣೆ ಕೊಡಿಸಿದ್ದು ಯುಕ್ತವಾಗಿದೆ.
ಆದರೂ ಶಾಂತಿ ಎಂಬ ರಸವೇ ಇಲ್ಲವೆಂದು ಗಾಂಧರ್ವ ವಿದ್ಯಾಚಾ
ರ್ಯರುಗಳು ಸಮರ್ಥನ ಮಾಡಿರುವರು. ಆದ್ದರಿಂದ ಈ ನಾಟಕ
ದಲ್ಲಿ ಶಾಂತಿರಸವನ್ನು ಪ್ರಧಾನವಾಗಿಟ್ಟಿರುವುದು ಹೇಗೆ ?

ಸೂತ್ರಧಾರ—(ಅಲಕ್ಷ್ಯದಿಂದ) ಆರ್ಯಳೇ, ಅವರು ಭರತಮತವನ್ನು ಚ
ನ್ನಾಗಿ ಪರಿಶೀಲನೆ ಮಾಡಿಲ್ಲವೆಂದು ಊಹಿಸುತ್ತೇನೆ. ಅಥವಾ ಅಂ
ತಹ ಸಭ್ಯರು ಲೋಕದಲ್ಲಿ ದುರ್ಲಭವೆಂದರಿತು ಶಾಂತಿರಸೋಲ್ಲಾ
ಸವು ಅಶಕ್ಯವೆಂದು ಅವರು ತಿಳಿದಿರಬಹುದು. ವಿಚಾರಮಾಡಿ
ನೋಡಿದರೆ ಶಾಂತಿರಸವೇ ಶ್ರೇಷ್ಠವಾದ ರಸವು ನೋ
ಡು. ಶೃಂಗಾರರಸವು ಅಸಭ್ಯರ ಮಾರ್ಗವನ್ನು ಆಶ್ರಯಿ
ಸುತ್ತದೆ. ವೀರರಸವು ಪರಸ್ಪರ ತಿರಸ್ಕಾರವನ್ನು ಹೊರಪಡಿ
ಸುತ್ತದೆ. ಅದ್ಭುತರಸವು ಅನುಪಪನ್ನವಾದ ಅರ್ಥವನ್ನು ತೋರಿ
ಸುವುದರಿಂದ ವಿರುದ್ಧಗತಿಯುಳ್ಳದ್ದಾಗಿದೆ. ಅಲ್ಪಗಳಾದ ಭೀಭ
ತ್ಸಾದಿ ರಸಗಳ ವಿಷಯದಲ್ಲಿ ಹೇಳತಕ್ಕದ್ದೇನು ? ಮನಸ್ಸಿನ ದುಃ
ಖವನ್ನೆಲ್ಲವನ್ನೂ ಹೋಗಲಾಡಿಸುವುದರಿಂದ ಶಾಂತಿರಸವೇ ಮು
ಖ್ಯವು.

ನಟ—ಸನಕಸನಂದನಾದಿ ಮುನಿಗಳಿಂದ ಪರಿಗೃಹೀತವಾದ ಅಂತಹ ರಸ
ವೊಂದಿದ್ದರೂ ಇರಬಹುದು. ಆದರೂ ನಿಶ್ಚಲವಾದ ನಿಖಿಲೇಂದ್ರಿ
ಯಗಳಿಂದ ಸಂಪಾದಿಸಬಹುದಾದ ಯೋಗಕ್ಕೆ ಪ್ರಧಾನವಾದ ಈ ರ
ಸವನ್ನು ಸರ್ವರೂ ನೋಡುವುದಕ್ಕೆ ಯೋಗ್ಯವಾದ ನಾಟಕ ವೃ
ತ್ತಾಂತದಲ್ಲಿ ಹೇಗೆ ತೋರಿಸುವುದು ?

ಸೂತ್ರಧಾರ—ಆರ್ಯಳೇ, ಹಾಗೆ ಹೇಳಬೇಡ. ನಾವು ಸಮಸ್ತವಾದ ಶ್ರೌತ, ಸ್ಮಾರ್ತ ಧರ್ಮಗಳನ್ನು ತೊರೆದು, ಧರ್ಮತ್ಯಾಗ ಮಾಡಿದಾಗ್ಯೂ, ಪಾಪಲೇಪವಿಲ್ಲವೆಂದು ವಾದಿಸುವವರ ಮತವನ್ನು ಅಭಿನಯಿಸುವುದಿಲ್ಲ. ಗೀತಾಚಾರ್ಯನಾದ ಭಗವಾನ್ ಶ್ರೀ ಕೃಷ್ಣನು ಅನೇಕ ವೇಳೆ ಪ್ರತಿಪಾದನ ಮಾಡಿರುವ ಫಲಸಂಬಂಧವನ್ನು ಬಿಟ್ಟು ಕರ್ಮವನ್ನು ಮಾಡಬೇಕೆಂಬ ಸಾತ್ವಿಕತ್ಯಾಗದಿಂದ ಕೂಡಿ, ನಿವೃತ್ತಿಧರ್ಮವನ್ನು ಅನುಷ್ಠಾನದಲ್ಲಿಟ್ಟುಕೊಂಡಿರುವ ನಾನಾವಿಧವಾದ ಅಭಿಗಮನ, ಉಪಾದಾನ, ಸಮ್ಮಾರ್ಜನ, ಉಪಲೇಪನ, ಮಾಲಾಬಂಧನ, ದೀಪಾರೋಪಣ ಮೊದಲಾದ ವ್ಯಾಪಾರಗಳುಳ್ಳ ಭಾಗವತೋತ್ತಮರುಗಳು ಇರುವರಲ್ಲವೇ? ಅವರಲ್ಲಿ ಇದನ್ನು ಅಭಿನಯಿಸುವುದರಿಂದ, ನರ್ತಕರುಗಳಿಗೆ ಅವಕಾಶವಿರುವುದು. ಮತ್ತು ನಾಟಕದಲ್ಲಿ ತೋರಿಸುವುದಕ್ಕೆ ಆಗದಿರುವ ಶಾಸ್ತ್ರವು ಶಾಸ್ತ್ರವಲ್ಲ, ವಿದ್ಯೆಯು ವಿದ್ಯೆಯಲ್ಲ, ಶಿಲ್ಪವು ಶಿಲ್ಪವಲ್ಲ, ಕಲೆಯು ಕಲೆಯಲ್ಲ ಯೋಗವು ಯೋಗವಲ್ಲ, ಜ್ಞಾನವು ಜ್ಞಾನವಲ್ಲ.

ನಟಿ—ಆರ್ಯನೇ, ಅಸಾಧ್ಯವಾದ ಕೆಲಸವನ್ನು ಆರಂಭಿಸಿದ ಹಾಗಾಯಿತು. ನಾನಾದರೋ ಸ್ತ್ರೀಸ್ವಭಾವದಿಂದ ಭ್ರಮಿಸಿದ ಮನಸ್ಸುಳ್ಳವಳಾಗಿ ಮತ್ಸರಗ್ರಸ್ತರಾದ, ಪ್ರತಿಕಕ್ಷಿಗಳಾದ ಪಂಡಿತರುಗಳಿಂದ ಹೆದರುವೆನು.

ಸೂತ್ರಧಾರ—ಹೆದರಿಕೆಯೇನು ? ಈಗ ಭಾಗ್ಯವು ನಮ್ಮ ಅಭಿಮುಖವಾಗಿರುವುದು. ಹೇಗಂದರೆ, ಈ ನಾಟಕದಲ್ಲಿ ನಾಟಕ ಲಕ್ಷಣಗಳು ನಿರ್ದುಷ್ಟಗಳಾಗಿ ತುಂಬಿರುವುವು. ಶೃಂಗಾರಾದಿ ರಸಗಳ ಪರಿಪೋಷವೂ ಸಹ ನಿರ್ಮತ್ಸರರಾದ ಜನಗಳಿಂದ ಗ್ರಹಿಸುವುದಕ್ಕೆ ಯೋಗ್ಯವಾಗಿ ತುಂಬಿರುವುದು. ನಮ್ಮಗಳ ಸುಕೃತಪರಿಪಾಕವಿದು. ಮತ್ತು ಇದರ ಕವಿಯಾದ ವೇಂಕಟನಾಥನು ವಿದ್ಯಾನಿಧಿಯಾದವನು. ನಮ್ಮ ಪಾತ್ರವರ್ಗವು ಬಹು ಕಾಲದಿಂದಲೂ ಅಭಿನಯದಲ್ಲಿ ಬಹು ಪರಿಚಯಮುಳ್ಳದ್ದಾಗಿದೆ. ಈ ಸಭಿಕರೂ ಕೂಡ ಪಕ್ಷಪಾತರಹಿತರಾಗಿರುವರು. ನಾಟಕಾಭಿನಯಸ್ಥಾನವೂ ಸಹ ಶ್ರೀ ರಾ

ಮಚಂದ್ರನ ಕುಲಧನವಾದ ಶ್ರೀರಂಗನಾಥನ ಕ್ಷೇತ್ರವಾಗಿರುವುದು. ಮತ್ತು ಕೇಳು. ಶಾಂತರಾದ ಋಷಿಗಳಿಗೆ ಸಿಧಿಯಂತೆ ಅಭಿಮತವಾದ ಸತ್ವಗುಣಪ್ರಚುರವಾದ ಈ ಪ್ರಯೋಗವನ್ನು ರಜಸ್ತಮೋ ಗುಣಗಳಿಗೆ ಅಧೀನರಾಗಿ ಶಾಂತರಾದವರು ಸ್ತೋತ್ರಮಾಡಲಿ. ಅಥವಾ ನಿಂದಿಸಲಿ. ಅದರಿಂದ ನಮಗೆ ಹಾನಿಯೇನು ? ಇದರ ಗುಣದೋಷಗಳನ್ನು ಈಶ್ವರನು ಅರಿಯುವನು. ಇದಕ್ಕೆ ಆ ಭಗವಂತನೇ ಹದಿನಾಲ್ಕು ಜನ ಸಾಕ್ಷಿಗಳನ್ನಿಟ್ಟಿರುವನು. ಮತ್ತು ವಿದ್ವಾಂಸರ ಅಸೂಯೆಗಳು ಯತ್ನವಿಲ್ಲದೆ ಒಂದೊಂದು ಸಮಯದಲ್ಲಿ ಪ್ರಾಪ್ತಗಳಾದಾಗ್ಯೂ, ಮಿಂಚಿನಂತೆ ಆಗಲೇ ನಷ್ಟವಾಗಿ ಹೋಗುವುವು. ಅಥವಾ ಮಾತ್ಸರ್ಯದಿಂದ ಕೂಡಿ ನಮಗೆ ವಿರೋಧಿಗಳಾದ ಪಂಡಿತರುಗಳು ಪ್ರಯೋಗವನ್ನು ಹೊಗಳುವ ವಿಷಯದಲ್ಲಿ ಮೌನವನ್ನು ಧರಿಸಬಹುದು. ಆದರೇನು? ಅನಂತರದಲ್ಲಿ ಅದೇ ಪಂಡಿತರುಗಳು ಕದಂಬ ಪುಷ್ಪಗಳಂತೆ ರೋಮಾಂಚವುಳ್ಳವರಾಗಿ ನಾಚಿಕೆಯಿಂದ ಕೂಡಿ ಮುಖವನ್ನೆತ್ತಿ, ಶಿರಃಕಂಪನಪೂರ್ವಕವಾಗಿ ನಮ್ಮ ಪ್ರಯೋಗದಲ್ಲಿರುವ ರಸವನ್ನು ಸ್ತೋತ್ರಮಾಡಿಯೇ ಮಾಡುವರು. ಅಥವಾ ನಿರಂತರವಾಗಿಯೂ ಮಾತ್ಸರ್ಯದಿಂದ ತುಂಬಿದ ಮನಸ್ಸುಳ್ಳವರಾಗಿ ವಿಕಾರರಹಿತರಾಗಿ ಇದ್ದರೂ ಇರಲಿ. ಸರ್ವ ಪ್ರಕಾರದಿಂದಲೂ ಭ ರ ತ ನು ತನ್ನ ಹೆಸರಿನಿಂದಲೇ ಭಾವರಾಗತಾಳಗಳನ್ನು ಸೂಚಿಸುತ್ತಾ, ಲೋಕರಕ್ಷಣಕ್ಕಾಗಿ ಉದಾರವಾದ ಮನಸ್ಸಿನಿಂದ ಯಾವ ಉಪವೇದವಾದ ಗಂಧರ್ವ ವೇದವನ್ನು ಹೇಳಿರುವನೋ ಅದನ್ನು ತಿಳಿದವರೊಳಗೆ ನಾವು ಬಹಿಷ್ಕೃತರಲ್ಲವಷ್ಟೆ.

ನಟಿ—ಆರ್ಯನೇ, ಅದು ಹಾಗೆಯೇ ಸರಿ. ಆದರೂ ಬಹುಶ್ರುತರಾದ ವಿರೋಧಿಗಳನೇಕರು ನಮ್ಮ ದೋಷಗಳನ್ನೇ ಹುಡುಕುವುದರಲ್ಲಿ

---

ಆದಿತ್ಯ ಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋಹೃದಯಂ ಯಮಶ್ಚ ॥ ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇಧರ್ಮಶ್ಚ ಜಾನಾತಿ ನರಸ್ಯ ವೃತ್ತಂ॥

ಕಾದಿರುವಾಗ ನಾವು ಪ್ರಮಾದವನ್ನು ವಹಿಸದೆ, ನಮ್ಮ ಪ್ರತಿಜ್ಞೆಯನ್ನು ನಿರ್ವಹಿಸುವುದು ಹೇಗೆ?

ಸೂತ್ರಧಾರ—ಎಲೌ ಪರಗುಣ ಸಂತೋಷಿಣಿಯೇ, ಬಹುಶ್ರುತರ ವಿಷಯದಲ್ಲಿ ನಿನಗೇಕೆ ಇಷ್ಟು ಯೋಚನೆ ; ಅಥವಾ ಸಮಸ್ತವೂ ತಿಳಿದಿದ್ದಾಗ್ಯೂ ಕೂಡ ತಿಳಿದದ್ದನ್ನು ಸ್ಥಿರಪಡಿಸುವುದಕ್ಕೋಸ್ಕರ ಮೇಲೆ ಮೇಲೆ ಪ್ರಶ್ನೆಯನ್ನು ಮಾಡುವುದುಂಟು. ಇರಲಿ. ಅಶುದ್ಧವಿದ್ಯರಿಗಿಂತಲೂ ವಿಶುದ್ಧವಿದ್ಯರು ಅಂದರೆ ದೃಢಪರಿಚಿತವಾದ ವಿದ್ಯೆಯುಳ್ಳವರನ್ನು ಅಧಿಕರೆಂದು ತಿಳಿದುಕೊ. ನೋಡು ಕಳಂಕಿತವಾದ ಕಲೆಗಳನ್ನು ಬಹಳವಾಗಿ ಧರಿಸಿದವನಾದಾಗ್ಯೂ, ಕ್ರಮವಾಗಿ ಕ್ಷೀಣನಾಗುತ್ತಾನೆ. ಶುದ್ಧವಾದ ಕಲೆಯನ್ನು ಒಂದನ್ನೇ ಹೊಂದಿದವನಾದಾಗ್ಯೂ, ಗಿರೀಶನಾಗುವನು. ಇದಕ್ಕೆ ಚಂದ್ರಶಂಕರರೇ ಸಾಕ್ಷೀಭೂತರಾಗಿರುವರು. ಆದಕಾರಣ ನಾನು ಈಗ ಪರಾಶರ ಪಾರಾಶರ್ಯಾದಿ ಮಹರ್ಷಿಗಳಂತೆ ಪೂಜ್ಯರಾಗಿ ಗಾಂಧರ್ವ ವಿದ್ಯಾ ವಿನೋದದಿಂದ ಪರಮಪುರುಷನ ಅನುಗ್ರಹವನ್ನು ಪಡೆದಿರುವ ಈ ಸಭಿಕರನ್ನು ಪ್ರಾರ್ಥಿಸುವೆನು.

ಎಲೈ ಸಭಿಕರೇ, ಜೀವಾತ್ಮನಿಗೆ ಮೋಕ್ಷಪ್ರಾಪ್ತಿರೂಪವಾದ ಕಥಾನಾಯಕನಾದ ವಿವೇಕನ ಉದ್ಯೋಗವನ್ನು ವಿವರಿಸುವ ಬೀಜಾರಂಭ ಸಮನ್ವಯಾತ್ಮಕವಾದ ಪ್ರಥಮಾಂಕದಲ್ಲಿಯೂ, ಮೋಕ್ಷಪ್ರಾಪ್ತಿಗೆ ವಿರುದ್ಧವಾದ ಬಾಹ್ಯಕುದೃಷ್ಟಿಮತದ ಭಂಗಪ್ರಯತ್ನವನ್ನು ವಿವರಿಸುವ ಬಿಂದುಯತ್ನ ಸಮನ್ವಯರೂಪವಾದ ದ್ವಿತೀಯಾಂಕದಲ್ಲಿಯೂ ಮೋಕ್ಷೇಚ್ಛೆಯ ಸಂಸಿದ್ಧಿಯನ್ನು ತೋರಿಸುವ ಪತಾಕಾ ಪ್ರಾಪ್ತ್ಯಾಶಾ ಸಮನ್ವಯ ರೂಪಗಳಾದ ತೃತೀಯ, ಚತುರ್ಥ, ಪಂಚಮ, ಷಷ್ಠ, ಸಪ್ತಮ, ಅಷ್ಟಮಾಂಕಗಳಲ್ಲಿಯೂ, ಮೋಕ್ಷಲಾಭರೂಪವಾದ ಫಲವನ್ನು ವಿವರಿಸುವ ಕಾರ್ಯಫಲಾನ್ವಯ ಸಮನ್ವಯರೂಪವಾದ ದಶಮಾಂಕದೊಂದಿಗೆ ಕೂಡಿದ ಯೋಗಸಮಾಧಿಯನ್ನು ವಿವರಿಸುವ ಪ್ರಕರೀನಿಯತಾಪ್ತಿ ಸಮನ್ವಯ ರೂಪವಾದ ನವಮಾಂಕದಲ್ಲಿಯೂ, ಮುಖ, ಪ್ರತಿಮುಖ, ಗರ್ಭ, ಅವಮ

---

ಈಶ್ವರ, ಬೃಹಸ್ಪತಿ.

ರ್ಶ, ಉಪಸಂಹೃತಿಗಳೆಂಬ ಐದು ಸಂಧಿಗಳನ್ನೂ ಈ ನಾಟ್ಯದಲ್ಲಿ ಸಮರ್ಥ
ರಾದ ಸಿಭ್ಯರುಗಳು ನೋಡುವುದರಲ್ಲಿ ಅವಧಾನವನ್ನು ತೆಗೆದುಕೊಳ್ಳಬೇ
ಕೆಂದು ಪ್ರಾರ್ಥಿಸುವೆನು.

(ತೆರೆಯಲ್ಲಿ)

ಸಮಯನಿಯುಕ್ತೈಃ ಪ್ರಯೋಗೈಃ ಸತ್ಪಥಸೀಮಾಮನುಜ್ಝತೋ ವಿದುಷಃ |
ಕಿರಣೈರಿವ ದಿವಸಕೃತಃ ಕ್ಷಿಪ್ಯಂತೆ ತಾಮಸಾರಂಭಾಃ ||

(ಸನ್ಮಾರ್ಗವನ್ನು ಬಿಡದಿರುವ ವಿದ್ವಾಂಸನ ಸಮಯ ನಿಯತಗಳಾ
ದ ಪ್ರಯೋಗಗಳಿಂದ ಸೂರ್ಯನ ಕಿರಣಗಳಂತೆ ತಾಮಸಾರಂಭಗಳು ನಾಶ
ಮಾಡಲ್ಪಡುತ್ತಲಿವೆ.)

ಸೂತ್ರಧಾರ—(ಕಿವಿಗೊಟ್ಟು ಕೇಳಿ) ಆರ್ಯಳೇ, ಚೆನ್ನಾಗಿ ಕೇಳು. ಸ
ನ್ಮಾರ್ಗವನ್ನು ಬಿಡದಿರುವ ವಿದ್ವಾಂಸರಾದ ನಾವುಗಳು ಸಮಯೋ
ಚಿತಗಳಾದ ಪ್ರಯೋಗಗಳಿಂದ ದೋಷದೃಷ್ಟಿಗಳುಳ್ಳ ತಮೋಗು
ಣಪ್ರಚುರರಾದ ನಟರುಗಳ ಪ್ರವೃತ್ತಿಗಳನ್ನು ನಾಶಮಾಡುತ್ತೇವೆ
ಎಂತಲೂ, ಸನ್ಮಾರ್ಗವನ್ನು ಬಿಡದಿರುವ ಉಪಾಸಕನು ಸಮಯ
ಅಂದರೆ, ವರ್ಣಾಶ್ರಮಗಳಿಗೆ ಉಚಿತಗಳಾದ ಪ್ರಕೃಷ್ಟವಾದ
ಯೋಗಗಳಿಂದ ತಮೋಮೂಲಕವಾದ ಪಾಪಗಳ ಪ್ರವೃತ್ತಿಗ
ಳನ್ನು ನಾಶಮಾಡುವನೆಂತಲೂ, ಸನ್ಮಾರ್ಗದಲ್ಲಿರುವ ಪ್ರಪನ್ನನು
ಸ್ವವರ್ಣಾಶ್ರಮೋಚಿತಗಳಾದ ಅಭಿಗಮನಾದಿ ಅನುಷ್ಠಾನಗಳಿಂದ
ತಮೋಮೂಲಕವಾದ ಅಜ್ಞಾನಗಳ ಪ್ರವೃತ್ತಿಗಳನ್ನು ನಾಶಮಾಡು
ವನೆಂತಲೂ, ಸನ್ಮಾರ್ಗವನ್ನು ಬಿಡದಿರುವ ವಿದ್ವಾಂಸನಾದ ವಿವೇ
ಕನು ಸಮಯೋಚಿತಗಳಾದ ವಿಜಯ ವ್ಯಾಪಾರಗಳಿಂದ ತಾಮಸ
ನಾದ ಮಹಾಮೋಹನ ಆರಂಭಗಳನ್ನೆಲ್ಲವನ್ನೂ ನಾಶಮಾಡುವನೆಂ
ತಲೂ, ನಕ್ಷತ್ರಮಾರ್ಗವನ್ನು ಬಿಡದಿರುವ ಸೂರ್ಯನು ಆಯಾಯ
ಕಾಲಕ್ಕೆ ಅನುಗುಣವಾಗಿ ಕಿರಣಗಳನ್ನು ಬೀರಿ ಕತ್ತಲೆಯ ವ್ಯಾ
ಪಾರಗಳನ್ನು ನಾಶಗೊಳಿಸುವನೆಂತಲೂ, ನಮ್ಮ ವೃತ್ತಿಯನ್ನೂ
ಮೋಕ್ಷವೃತ್ತಿಯನ್ನೂ ಈ ಔದ್ಘಾತಿಕ ಗೀತಿಯು ತಂತ್ರದಿಂದ
ಪ್ರಕಾಶಪಡಿಸುತ್ತಿರುವುದು. ಆದ್ದರಿಂದ ದೂರದೃಷ್ಟಿಯುಳ್ಳ ಈ

ನಾನೂ, ವಿವೇಕನೂ ದುಷ್ಟನಾದ ಶತ್ರುವನ್ನೂ, ಮಹಾಮೋಹನ ನ್ನೂ ಜಯಿಸುವುದಕ್ಕೆ ಸಮರ್ಥರಾಗಿದ್ದೇವೆ.

(ತೆರೆಯಲ್ಲಿ)

ಇವನು ಯಾರು ? ನಟಕುಲವಿನಾಶಕನು. ಕಾರ್ಯದಲ್ಲಿ ಕಠಿನ ವಾಗಿಯೂ, ಸ್ವರೂಪದಲ್ಲಿ ಮಧುರವಾಗಿಯೂ ಇರುವ ಬಿಲ್ಲನ್ನು ಹಿಡಿದು, ವಾಸನೆಯುಳ್ಳವುಗಳಾಗಿಯೂ, ಸುಕುಮಾರಗಳಾಗಿಯೂ ಇರುವ ಬಾಣಗ ಳಿಂದ ಸಮಸ್ತರಾದ ಶತ್ರುಗಳನ್ನೂ ಹೆದರಿಸುವ ನಾನು ಬದುಕಿರುವಾಗ ಸಮಸ್ತ ಸುರಾಸುರ ಮುನಿಮನುಜ ಮನೋವ್ಯಾಪಾರಗಳಿಗೆ ಸಾರ್ವ ಭೌಮನಾಗಿ, ದುರ್ಮತಿಗೆ ಪತಿಯೆನಿಸಿದ ರಣರಂಗ ಮಹಾನಟನಾದ ಮಹಾರಾಜ ಮಹಾಮೋಹನಿಗೆ ಹೇಳಕೂಡದ ಅನಿಷ್ಟವನ್ನು ಆಶಿಸುವನು.

ಸೂತ್ರಧಾರ—(ಭಯದಿಂದ ತಿರುಗಿನೋಡಿ) ಕೋಪದಿಂದ ಕೆಂಪಾದ ಕಣ್ಣು ಳ್ಳವನಾಗಿ ಇಲ್ಲಿ ಬರುತ್ತಿರುವವನು ಯಾರಿರಬಹುದು. ತಿಳಿಯಿತು. ಧರ್ಮಾರ್ಥಕಾಮಗಳಲ್ಲಿ ಆಸಕ್ತರಾದವರಿಗೆ ಪ್ರಧಾನಪುರುಷಾರ್ಥವೆ ನಿಸಿದ ಕಾಮಪುರುಷಾರ್ಥಕ್ಕೆ ಅಧಿದೇವತೆಯಾದ ಕಾಮನು. ಇವ ನು ಮಹೇಶ್ವರನ ಪೌರುಷದಲ್ಲಿ ಅರ್ಧವನ್ನು ಮಾತ್ರ ಉಳಿಸಿರು ವನು. ಕಾಮಪುರುಷಾರ್ಥವನ್ನು ಅಲಕ್ಷ್ಯ ಮಾಡುವವರನ್ನು ಶಿಕ್ಷಿಸುವನು. ರತಿಸಮೇತನಾಗಿ ಬರುತ್ತಿರುವನು. ಆದ್ದರಿಂದ ನಾವು ಇಲ್ಲಿಂದ ಜಾಗ್ರತೆ ಹೊರಟು, ಕಾಲೋಚಿತವಾದ ಕಾಮೋ ತ್ಸವದ ವಿಕಾರದಲ್ಲಿ ಮೈಮರೆತಿರುವ ಜನಗಳಲ್ಲಿ ರಹಸ್ಯವಾಗಿದ್ದು ಕೊಂಡು, ಮುಂದಿನ ಕೆಲಸವನ್ನು ಮಾಡೋಣ (ಎಂದು ಹೊರ ಟು ಹೋಗುವರು. ವಸಂತನ ಕೈಯ್ಯನ್ನು ಹಿಡಿದುಕೊಂಡು, ರತಿಯೊಂದಿಗೆ ಕಾಮನು ಪ್ರವೇಶಿಸುವನು.)

ಕಾಮ—ಎಲೈ ಭರತಕುಲ ಕಳಂಕನೇ, ಸುಂದರವಾದ ಹುಬ್ಬುಗಳನ್ನು ಬಿಲ್ಲಿನಂತೆ ಸ್ವಲ್ಪ ಬಾಗಿಸಿ, ಚಪಲ ಜನಗಳ ಮನಸ್ಸಿಗೆ ಗುರಿಯಿ ಟ್ಟು ಸ್ತ್ರೀಯರ ಕಣ್ಣುಗಳೆಂಬ ಬಾಣಗಳು ಸ್ನೇಹಸಿಕ್ತಗಳಾಗಿ ಬಿ ಡಲ್ಪಟ್ಟರೆ, ದಿಕ್ಕೆಟ್ಟು ಓಡುವ ವಿವೇಕನಿಗೆ ಅವಕಾಶವೆಲ್ಲಿ ದೊರ ಕುವುದು ?

ವಸಂತ—(ತನ್ನಲ್ಲಿ ತಾನು) ಉದ್ಧತನಾದ ಈ ಮನ್ಮಥನು ಬಹಳ ಗರ್ವ ವುಳ್ಳವನಾಗಿರುವನು. ನಾನಾದರೋ ಅರ್ಚಿರಾದಿ ಮಾರ್ಗದಲ್ಲಿ ಸಂಚರಿಸುವ ಮಹಾತ್ಮರುಗಳ ಆತಿವಾಹಿಕರ ಸಮೂಪದಲ್ಲಿ ಸೇರಿ ದವನಾದಾಗ್ಯೂ, ಬಹು ಕಾಲದಿಂದಲೂ ಬಂದ ಮನ್ಮಥನ ಸ್ನೇಹ ವನ್ನು ಈ ಕ್ಷಣವೇ ಬಿಡಲು ಸಾಧ್ಯವಿಲ್ಲದವನಾಗಿದ್ದೇನೆ. (ಪ್ರಕಾಶ ವಾಗಿ) ಮಿತ್ರನೇ, ನೀನು ಹೇಳುವುದು ಹಾಗೆಯೇ ಸರಿ. ನಾನಾದರೋ ಮಹಾರಾಜ ಮಹಾಮೋಹನ ಮುಂಗಳಕ್ಕೋಸ್ಕರ ವಿವೇಕನನ್ನು ಓ ಡಿಸುವ ನಿನ್ನ ಮಹೋತ್ಸವವನ್ನು ಆರಂಭಿಸಿರುವೆನು, ನೋಡು. ಇಲ್ಲಿ ವಿಲಾಸಪ್ರಿಯರಾದ ಜನಗಳು ಕಲ್ಹಾರ ಕುಸುಮಗ ಳನ್ನು ತಲೆಯಲ್ಲಿ ಮುಡಿದುಕೊಂಡು, ಸುವರ್ಣಮಯವಾದ ಶೃಂಗ ಗಳಲ್ಲಿ ವಸಂತಗಳನ್ನು ತುಂಬಿ ಸುಂದರಿಯರ ಮೇಲೆ ಎರಚುತ್ತಿ ರುವರು. ಆ ಸುಂದರಿಯರುಗಳಿಂದ ತೆಂಗಲಿನ ಚೀಲಗಳಲ್ಲಿ ತುಂ ಬಿ ಕೈಗಳಿಂದ ಒತ್ತಿ ಬಿಡಲ್ಪಟ್ಟ ಪ್ರವಾಹದಂತೆ ಮೇಲೆ ಬೀಳುವ ಕಸ್ತೂರಿಮಿಶ್ರವಾದ ನೀರುಗಳಿಂದ ಈ ತರುಣರ ತಲೆಕೂದಲುಗ ಳೆಲ್ಲವೂ ಕೆಸರಾಗಿವೆ.

ಕಾಮ—ಎಲೈ ವಸಂತನೇ, ನೀನು ಮಾಡಿರುವ ಕೆಲಸವು ಬಹಳ ಸಾಧು ವಾಗಿದೆ. ಸರ್ವಪ್ರಕಾರದಲ್ಲಿಯೂ ಆ ನೀಚ ವಿವೇಕನು ಸೋತ ನೆಂತಲೇ ತಿಳಿಯುತ್ತೇನೆ. ಈ ಮಹೋತ್ಸವವೂ ಕೂಡ ಸ್ವರ್ಗ ವನ್ನು ಧಿಕ್ಕರಿಸುವ ಕಾವೇರೀ ನದಿಯ ತೀರಪ್ರದೇಶಗಳಲ್ಲಿಯೇ ಆ ರಂಭವಾಗಿರುವುದು ಮತ್ತೂ ವಿಶೇಷ. ಈ ಕಾವೇರೀ ತೀರದಲ್ಲಿ ಉಭಯ ಪಾರ್ಶ್ವಗಳಲ್ಲಿಯೂ ನೀರು ತುಂಬಿ ಹರಿಯುವ ಅನೇಕ ಕಾಲುವೆಗಳು ನೋಡುವುದಕ್ಕೆ ಬಹಳ ಅಂದವಾಗಿರುವುವು. ಕಾ ಡುಗಳಂತೆ ತಾವರೆಯ ಬಳ್ಳಿಗಳು ಬೆಳೆದು, ಅರಳಿದ ಹೂ ವುಗಳಿಂದ ತುಂಬಿರುವುವು. ಇಲ್ಲಿ ಚೋಳಸ್ತ್ರೀಯರುಗಳು ಸ್ನಾ ನಮಾಡುವಾಗ ಅವರ ಕೂದಲುಗಳು ನೀರಿನಲ್ಲಿ ಹರಡಿ ಪಾಚಿಗ ಳಂತೆ ಕಾಣುತ್ತಿರುವುವು. ಹಂಸಗಳು ಅಲ್ಲಲ್ಲಿ ಸಂಚರಿಸುತ್ತಿದ್ದ ರೆ ಕಾವೇರಿಯು ಮಂದಹಾಸ ಮಾಡುವಂತೆ ಕಾಣುತ್ತಿರುವುದು.

ರತಿ—ಆರ್ಯಪುತ್ರನೇ, ಈ ಮಹೋತ್ಸವವು ನೋಡುವುದಕ್ಕೆ ಅಂದವಾಗಿ ದ್ದಾಗ್ಯೂ, ನನ್ನ ಮನಸ್ಸಿಗೆ ಅಷ್ಟು ಸಂತೋಷವಾಗಿಲ್ಲ. ಏ ಕೆಂದರೆ ನಮ್ಮ ಸ್ವಾಮಿಯಾದ ಮಹಾಮೋಹ ಮಹಾರಾಜನಿಗೆ ದೈವದುರ್ವಿಪಾಕದಿಂದ ದುರ್ಜಯನಾದ ವಿವೇಕನು ಸಫಲೋ ದ್ಯೋಗವುಳ್ಳವನಾಗಿ ಶತ್ರುವಾಗಿರುವನೆಂದು ನನ್ನ ಹೃದಯವು ಸಂ ತಾಪವುಳ್ಳದ್ದಾಗಿರುವುದು.

ಕಾಮ—ಎಲೌ ವಿಷಮಶರ ಜೀವಿತೇಶ್ವರಿಯೇ, ವಿಲಾಸಿನೀ ದೇವತೆಯೇ ಸಂಪೂರ್ಣ ಶಕ್ತಿಯಿಂದ ಸರಿಯಾದ ಶತ್ರುವು ಜಯಿಸುವುದಕ್ಕೆ ಸಿಕ್ಕಿರುವುದರಿಂದ ಸಂತೋಷಪಡುವುದಕ್ಕೆ ಬದಲಾಗಿ ಸ್ತ್ರೀ ಸ್ವಭಾ ವ ಸುಲಭವಾದ ಚಪಲತೆಯಿಂದ ವಿವೇಕನ ವೈಭವವನ್ನು ಹೊಗ ಳುವೆಯಲ್ಲ? ಕಬ್ಬಿನ ಬಿಲ್ಲನ್ನು ಕೈಯ್ಯಲ್ಲಿ ಹಿಡಿದು, ಭ್ರಮರಶಿಂಜಿ ನಿಯಲ್ಲಿ ಪುಷ್ಪಬಾಣಗಳನ್ನು ನಾನು ಹೂಡಿದರೆ, ಆ ಮೇರುಪರ್ವತ ವನ್ನೇ ಬಿಲ್ಲಾಗಿ ಉಳ್ಳ ಈಶ್ವರನಾದರೂ, ನನ್ನ ಆಜ್ಞೆಯನ್ನು ಒಂ ದು ಕ್ಷಣವಾದರೂ ಮೀರಲಾರನು.

ವಸಂತ—ಸಖಿಯೇ, ಇದು ನಿಜ. ಇದು ಬರೀ ಹೊಗಳಿಕೆ ಎಂದು ತಿಳಿ ಯಬೇಡ. ಲೋಕದಲ್ಲಿ ಆನೆಗೆ ಸೊಳ್ಳೆಯು ಪ್ರತಿಭಟಿಸುವುದುಂ ಟೇ? ಅಥವಾ ನಾನೇನು ಹೇಳುವುದು. ನಿನ್ನ ಪ್ರಿಯನ ವೀರಚ ರಿತ್ರವು ನಿನಗೆ ತಿಳಿಯದೇ ಇಲ್ಲ. ಆದಿ ಬ್ರಹ್ಮನೂ ಕೂಡ ತನ್ನ ಹೆಂಡತಿಯಾದ ಸರಸ್ವತಿಯನ್ನು ವೇದವನ್ನು ಹೇಳುವ ಬಾಯಲ್ಲಿ ಯೇ ಇಟ್ಟುಕೊಂಡಿರುವನು. ಶಿವನ ವಾಮಭಾಗವಂತೂ ಹೆಂಗ ಸೇ ಆಗಿಹೋಗಿದೆ. ಪರತತ್ವವೆಂದು ಖ್ಯಾತಿಗೊಂಡ ಶ್ರೀ ಕೃಷ್ಣ ನೂ ಕೂಡ ಗೋಪೀಜನಕ್ಕೆ ಅಧೀನನಾಗಿರುವನು. ತ್ರಿಮೂರ್ತಿ ಗಳ ಸ್ಥಿತಿಯೇ ಹೀಗಿರುವಾಗ, ಇತರ ಜನಗಳು ಮನ್ಮಥ ಯುದ್ಧ ದಲ್ಲಿ ಹೇಗೆ ತಾನೇ ಕ್ಲೇಶವನ್ನು ವಹಿಸಲಾರರು?

ಕಾಮ—ವಸಂತನೇ, ಕಾಲಕ್ಕೆ ತಕ್ಕ ಮಾತನ್ನಾಡಿದೆ. ನೀನು ಬಾಣಗ ಳನ್ನು ಒದಗಿಸುತ್ತಿರಲು ಪ್ರಪಂಚವನ್ನೇ ಯುವತಿಯರ ವಶವ

ಲ್ಲಿ ಇತುವ್ರದಕ್ಕೆ ನಾನು ಸಂಸ್ಥಿತನಾಗಿರುವಾಗ ವಿವೇಕವು ಹೇಗೆ ತಾನೇ ನಿಲ್ಲುವನು ?

ರತಿ—ಆರ್ಯಪುತ್ರನೇ, ಅದಕ್ಕೆ ಸಂದೇಹವಿಲ್ಲ. ಆದರೂ ಸ್ಥಿರವಾಗಿ ಶತ್ರುಗಳಿಗೆ ಅಭೇದ್ಯವಾದ ವೈರಾಗ್ಯ ದುರ್ಗವನ್ನು ಆಶ್ರಯಿಸಿಕೊಂಡು ಶಮದಮ ಮೊದಲಾದ ಮಂತ್ರಿಗಳಿಂದ ಬಹಳ ಜಾಗರೂಕತೆಯಿಂದ ರಕ್ಷಿಸಲ್ಪಡುತ್ತಾ, ಸ್ವಯಂ ಅಸಹಾಯಶೂರನಾಗಿಯೂ, ಮಹಾ ಸಾಹಸಿಯಾಗಿಯೂ ಇರುವ ಶತ್ರುವು ಯಾವಾಗ ಏನು ಮಾಡುವನೋ ಎಂದು ಮನಸ್ಸು ಕಲುಷಿತವಾಗಿರುವುದು.

ಕಾಮ—ಎಲೆ ಭೀರುವೇ, ಅತಿಶಂಕೆಯಾಕೆ ? ಶತ್ರುಗಳಲ್ಲಿ ವಿಶ್ವಾಸವುಳ್ಳ ಮೂರ್ಖರ ಮಾತುಗಳಿಂದ ನೀನು ವಂಚಿತಳಾಗಿರುವೆ ಎಂದು ಕಾಣುವಿ. ಆದುದರಿಂದಲೇ ನಿನ್ನ ಪಕ್ಷದವರ ವೈಭವವನ್ನು ನಿಶ್ಚಯಿಸಲಾರೆ. ನಿನ್ನ ಪ್ರಿಯನಾದ ಜಗದ್ವಿಜಯಿಯಾದ ನನ್ನ ಜಗತ್ಪ್ರಸಿದ್ಧವಾದ ಉಪಕರಣವನ್ನು ನೋಡು. ನನ್ನ ಧನಸ್ಸು, ದೃಢವಾದ ಸೌಂದರ್ಯ ಗುಣಗಳೆಂಬ ಹದೆಯಿಂದ ಕೂಡಿ ಸ್ವಲ್ಪ ಬಾಗಿರುವ ಸ್ತ್ರೀಯರುಗಳ ಅನುಪಮವಾದ ಶರೀರವೇ ಆಗಿರುವುದು. ಬಾಣಗಳಾದರೋ ಕಿವಿಯವರೆಗೂ ವ್ಯಾಪಿಸಿರುವ ಅವರ ನೇತ್ರಗಳು. ಮಧುರಭಾಷಿಣಿಯರಾದ ಸ್ತ್ರೀಯರುಗಳ ಕರ್ಣಾಮೃತವಾದ ಹೆಸರು ಕಿವಿಗೆ ಬಿದ್ದರೆ ಸದ್ವೃತ್ತವನ್ನು ನಾಶಮಾಡುವುದು. ಶಾಂತಿಯನ್ನು ಕೆಳಗೆ ತಳ್ಳುವುದು, ನಾಚಿಕೆಯನ್ನು ಬಿಡಿಸುವುದು. ವೈರಾಗ್ಯವನ್ನು ಮರೆಮಾಡುವುದು. ಇನ್ನು ಯಾವ ವಿಕಾರವನ್ನು ತಾನೇ ಉಂಟುಮಾಡುವುದಿಲ್ಲ ?

ವಸಂತ—ಸ್ತ್ರೀಯರುಗಳ ನೋಟವಾಗಲೀ, ಗುಣಗಳ ವಿಚಾರವಾಗಲೀ ಹಾಗಿರಲಿ. ಅವರಲ್ಲಿರುವ ದೋಷಗಳನ್ನು ವಿಚಾರ ಮಾಡುವುದಕ್ಕೆ ಅವರನ್ನು ಸ್ಮರಿಸಿದರೂ ವೈರಾಗ್ಯವು ದೂರವಾಗಿ ಹೋಗುವುದು. ಮತ್ತು ಮದದಿಂದ ಕೂಡಿ ವಿಷಯಗಳೆಂಬ ಕಾಡುಗಳಲ್ಲಿ ಓಡುವ ಮನಸ್ಸನ್ನು ತನ್ನ ಬಲದಿಂದ ತಡೆಯುವುದೆಂದರೆ ಆವರೇದಂಟಿನಲ್ಲಿರುವ ನೂಲಿನಿಂದ ಐರಾವತವನ್ನು ತಡೆಯಲು ಪ್ರಯತ್ನಿಸಿದಂತೆ ಅಸಾಧ್ಯವು.

ರತಿ—ಆರ್ಯಪುತ್ರನೇ, ಭ್ರಾಂತಿಗಳೆಲ್ಲವನ್ನೂ ನಾಶಮಾಡುವುದರಲ್ಲಿ ಸಮರ್ಥರಾದ ಯೋಗೀಶ್ವರರ ಕಣ್ಣುಗಳಿಗೆ ಬೀಳದೆ ನಿನ್ನ ಪರಾಕ್ರಮವನ್ನು ತೋರಿಸಬೇಕು.

ಕಾಮ—(ನಕ್ಕು) ಪ್ರಿಯಳೇ, ನಿನ್ನ ಕಣ್ಣಿನಲ್ಲಿರುವ ಚಾಪಲ್ಯವು ಮನಸ್ಸಿಗೂ ವ್ಯಾಪಿಸಿದಂತೆ ಕಾಣುವುದು. ಆ ಯೋಗೀಶ್ವರರುಗಳನ್ನು ಯುವತಿ ಯೋಗೀಶ್ವರರ ಕಾಲುಗಳಲ್ಲಿ ಕೆಡಹುವೆನು. ನೋಡುವುದಕ್ಕೆ ಸುಂದರಗಳಾಗಿಯೂ, ಕೆಲಸದಲ್ಲಿ ಕ್ರೂರಗಳಾಗಿಯೂ ಇರುವ ನನ್ನ ಬಾಣಗಳು ಉಮಾಶಂಕರರನ್ನು ಬೇರ್ಪಡಿಸುವುದಕ್ಕಾಗದಂತೆ ಸೇರಿಸಿ ಹೊಲದಿರುವುದನ್ನು ನೀನು ಕಾಣೆಯಾ ?

ರತಿ—ಆರ್ಯಪುತ್ರನೇ, ನಿನ್ನ ಮಹಿಮೆಯನ್ನು ನಾನು ಬಲ್ಲೆನು. ಬುದ್ಧಿಬಲದಿಂದಲೂ, ದೈವಸಹಾಯದಿಂದಲೂ ಯಮನಿಯಮ ಮೊದಲಾದ ಬಹು ಸಹಾಯಗಳಿಂದಲೂ ಸಂಪನ್ನನಾಗಿ ಅಖಂಡವಾದ ಪ್ರಭುಶಕ್ತಿ, ಮಂತ್ರಶಕ್ತಿ, ಉತ್ಸಾಹ ಶಕ್ತಿಗಳಿಂದ ಕೂಡಿರುವ ಶತ್ರುವು ಯಾವಾಗ ಏನುಮಾಡುವನೋ ಎಂದು ಪ್ರಬಲವಾದ ಗಾಳಿಗೆ ಸಿಕ್ಕಿದ ಬಾಳೆಯಂತೆ ನಡಗುತ್ತಿರುವೆನು. ಪ್ರಜ್ಞಾಬಲವು ಮೋಕ್ಷದವರೆಗಿನ ದುಷ್ಕರವಾದ ಸಿದ್ಧಿಗಳನ್ನು ಸಾಧಿಸಿಕೊಡುವುದೆಂಬುವುದು ಪ್ರಸಿದ್ಧವಾಗಿರುವುದಲ್ಲವೇ ?

ಕಾಮ—(ಕೋಪದಿಂದ ನಕ್ಕು) ಎಲೌ ಮುಗ್ಧಳೇ, ಭ್ರಮರ ಶಿಂಜಿನಿಯಲ್ಲಿ ಪ್ರಪಂಚಕ್ಕೆ ಗುರಿಯಿಟ್ಟು, ವಿಷಮ ಬಾಣಗಳನ್ನು ಹೂಡಿ ನಿತ್ಯವೂ ಜಯದಲ್ಲಿ ಜಾಗರೂಕನಾಗಿರುವ ನಿನ್ನ ಪ್ರಿಯನಾದ ನನ್ನ ಸನ್ನಿಧಿಯಲ್ಲಿ ಪ್ರಜ್ಞೆಯೆಂದರೇನು ? ಯಾರಿಗೆ ಯಾತರಿಂದ ಮೋಕ್ಷವಾಗುವುದು? ನಿನ್ನ ಮಧ್ಯದಲ್ಲಿರುವ ಸೂಕ್ಷ್ಮಭಾವವು ಮನಸ್ಸಿನಲ್ಲಿ ಏಕೆ ಕಾಣುವುದಿಲ್ಲ ? (ನಕ್ಕು) ಪ್ರಿಯೆ ತಿಳಿಯಿತು. ನಿನ್ನ ಸ್ತನದಲ್ಲಿರುವ ಸ್ಥೌಲ್ಯವು ಒಳಗೆ ಸೇರಿ, ನಿನ್ನ ಬುದ್ಧಿಯು ಸ್ಥೂಲಭಾವವನ್ನೇ ವಹಿಸಿರುವುದು. ಅಥವಾ ವಿಚಾರ ಮಾಡದಿದ್ದರೆ ಸುಂದರವಾಗಿ ಕಾಣುವ ಸ್ತ್ರೀಯರ ಸ್ವಭಾವವು ನಿನ್ನಲ್ಲಿಯೂ ಇರುವುದು. ಕೇಳು, ನನ್ನಿಂದ ಪ್ರೇರಿತ

ನಾದ ಕ್ರೋಧನು ಕಾರ್ಯಾಕಾರ್ಯವಿವೇಕವಿಲ್ಲದಂತೆ ಮಾಡುವನು. ಅನಂತರದಲ್ಲಿ ಸ್ಮೃತಿಯು ಭ್ರಂಶವಾಗುವುದು. ಆ ಸ್ಮೃತಿ ಭ್ರಂಶವು ಪ್ರಜ್ಞೆಯನ್ನು ಸಡಲಿಸುವುದು. ಪ್ರಜ್ಞಾಹೀನನಾದ ಜೀವನು ಅಜ್ಞಾನದಲ್ಲಿ ಲಯವನ್ನು ಹೊಂದುವನು. ಹೀಗಿರುವಾಗ. ಜಡಮತಿಯಾದ ವಿವೇಕನು ಏನನ್ನು ತಾನೇ ಉಂಟುಮಾಡ ಬಲ್ಲನು ? ನಮ್ಮ ಸಮೂಹವು ಹೀಗೆ ದುಸ್ಸಹವಾದ ವೇಗವುಳ್ಳದ್ದು. ವಿವೇಕನ ಮಂತ್ರಿಗಳಾದ ಶಮದಮಾದಿಗಳು ನಮ್ಮ ಬಲವಿನ್ಯಾಸವನ್ನು ಸಹಿಸಲಾರರು. ಸಮಸ್ತ ದೇವಾಸುರರುಗಳ ಕಿರೀಟದಲ್ಲಿ ತನ್ನ ಪಾದಪೀಠವನ್ನಿಟ್ಟು ಪ್ರಕಾಶಿಸುವ ಮಹಾಮೋಹನು ಸ್ವಯಂ ದುರ್ಜಯನಾಗಿರುವನು. ಕೇವಲ ಕ್ಷುದ್ರಮೃಗವು ಸಿಂಹಕ್ಕೆ ಪ್ರತಿಭಟಿಸಿ ನಿಲ್ಲಬಲ್ಲುದೇ ? ಪಂಚಾಯುಧಗಳನ್ನು ಧರಿಸಿರುವ ಪರಮಪುರುಷನಂತೆ ಐದು ಬಾಣಗಳನ್ನು ಧರಿಸಿರುವ ನಾನು ಅತಿ ಬಲಶಾಲಿಗಳಾದ ಶತ್ರುಗಳನ್ನೂ ಕೂಡ ಸಮಯವನ್ನು ನೋಡಿ ನಾಶಮಾಡುವೆನು. ಮತ್ತು ದೇವತೆಗಳು ಹಾಗಿರಲಿ. ಮೋಕ್ಷಕ್ಕೆ ಕಾರಣವಾದ ಧರ್ಮಗಳನ್ನು ಋಷಿಗಳಿಗೆ ಉಪದೇಶಿಸುತ್ತಾ, ತಪಸ್ಸಿನಲ್ಲಿ ವ್ಯಾಪ್ತನಾದ ವೇದಪ್ರತಿಪಾದ್ಯನಾದ ಶ್ರೀಮನ್ನಾರಾಯಣನ ಶಾಂತಿಯನ್ನೇ ವಿಚಾರಮಾಡಿ ನೋಡು. ಅವನು ತಪಸ್ಸಿನಲ್ಲಿರುವಾಗ ತನ್ನ ತೊಡೆಯಿಂದ ಸ್ತ್ರೀರತ್ನವಾದ ಊರ್ವಶಿಯನ್ನು ಸೃಷ್ಟಿಸಿದನು. ಸ್ತ್ರೀ ಸೃಷ್ಟಿಗೂ, ಶಾಂತಿಗೂ ಏನು ಸಂಬಂಧ ?

ರತಿ—ಆರ್ಯಪುತ್ರನೇ, ತಮ್ಮ ಮಾತೆಲ್ಲವೂ ನಿಜವೆಂದು ನಂಬುತ್ತೇನೆ. ತಮ್ಮ ಮಹಿಮೆಯು ಬ್ರಹ್ಮನ ಮೊದಲುಗೊಂಡು ಕೀಟಗಳವರೆಗೂ ಅಪ್ರತಿಹತವಾದದ್ದು. ಆದರೆ ನನಗೆ ತಿಳಿಯದ ಒಂದು ವಿಷಯವನ್ನು ತಾವು ಅಪ್ಪಣೆ ಕೊಡಿಸಬೇಕು.

ಕಾಮ—ಅದು ಯಾವುದು ?

ರತಿ—ವಿವೇಕನೇ ಮೊದಲಾದವರಿಗೂ, ಮಹಾಮೋಹನೇ ಮೊದಲಾದವ

ರಿಗೂ ಆನೆಗಳಿಗೂ, ಸಿಹ್ಮಗಳಿಗೂ ಇರುವಂತೆ ವೈರವು ಯಾವ ಕಾರಣದಿಂದ ಉಂಟಾಗಿರುವುದು ?

ಕಾಮ—ಪ್ರಿಯಳೇ, ಹಾಗಾದರೆ ಮೊದಲಿನಿಂದ ಕೇಳು. ಸತ್ವರಜಸ್ತಮೋಗುಣಗಳಿಂದ ಕೂಡಿದ ಜೀವನಿಂದ ಅವನಿಗೆ ಅನುರೂಪವಾದ ವ್ರತವುಳ್ಳ ಬುದ್ಧಿಯೆಂಬ ಪತ್ನಿಯು ಆಯಾಯ ಗುಣಗಳ ಉನ್ನತಿಯನ್ನನುಸರಿಸಿ ಮೂರು ಕುಲವನ್ನು ಪ್ರಸವಿಸಿದಳು. ಅವುಗಳಲ್ಲಿ ಮೊದಲನೆಯದಾದ ಸತ್ವಕುಲವು ಭೋಗದಲ್ಲಿ ದ್ವೇಷವುಳ್ಳದ್ದಾಗಿರುವುದು. ಈ ಕುಲದಲ್ಲಿ ವಿವೇಕನೇ ಜ್ಯೇಷ್ಠನು. ರಜೋಗುಣಪ್ರಧಾನವಾಗಿಯೂ, ತಮೋಗುಣಪ್ರಧಾನವಾಗಿಯೂ ಇರುವ ಉಳಿದ ಎರಡು ಕುಲಗಳು ಒಂದಕ್ಕೊಂದು ಸೇರಿಕೊಂಡಿರುವುವು. ಈ ಕುಲತ್ರಯದಲ್ಲಿ ಸಮಾನಸ್ವಭಾವವುಳ್ಳ ಶಮದಮಾದಿಗಳಿಂದ ವಿವೇಕನೂ, ಕಾಮಕ್ರೋಧಾದಿಗಳಿಂದ ಮಹಾಮೋಹನೂ ಅಭಿಷಿಕ್ತರಾಗಿರುವರು. ಈ ಇಬ್ಬರು ರಾಜರುಗಳಲ್ಲಿ ಮೋಕ್ಷದಲ್ಲಿ ದೋಷದೃಷ್ಟಿಯುಳ್ಳ ದುರ್ಮತಿ ಎಂಬುವಳು ಮಹಾಮೋಹನಿಗೆ ಪತ್ನಿಯಾಗಿರುವಳು. ವಿಷಯರಸಾನುಭವದಲ್ಲಿ ದೋಷದೃಷ್ಟಿಯುಳ್ಳ ಸುಮತಿ ಎಂಬುವಳು ವಿವೇಕನಿಗೆ ಪತ್ನಿಯಾಗಿರುವಳು.

ರತಿ—ಆಮೇಲೆ.

ಕಾಮ—ರಜೋಗುಣಪ್ರಧಾನರಾದ ರಾಗಾದಿಗಳು ತಮೋಗುಣದಲ್ಲಿ ಹುಟ್ಟಿದ ಸಂಸಾರ ಸಾರ್ವಭೌಮ ಮಹಾಮೋಹನಿಗೆ ದೈತ್ಯಕುಲಕ್ಕೆ ರಕ್ಷಃ ಕುಲವು ಅನುಕೂಲವಾಗಿರುವಂತೆ ಸಹಾಯವನ್ನು ಮಾಡುತ್ತಿರುವರು. ಸತ್ವಗುಣದಿಂದ ಹುಟ್ಟಿದ ವಿವೇಕ ಕುಲಕ್ಕೆ ಸಹಾಯವಿಲ್ಲ. ಬಲವು ಕಡಮೆ. ನಮ್ಮ ತಂದೆಯಾದ ಜೀವನು ತಾನು ಎಲ್ಲರಲ್ಲಿಯೂ ಸ್ವಭಾವವಾಗಿಯೇ ಸಮನಾಗಿರಬೇಕಾದರೂ, ಸಹಧರ್ಮಚಾರಿಣಿಯಾದ ಬುದ್ಧಿಯೊಂದಿಗೆ ಪ್ರಕೃತದಲ್ಲಿ ನಮ್ಮಲ್ಲಿಯೇ ವಿಶೇಷ ವಿಶ್ವಾಸವುಳ್ಳವನಾಗಿರುವನು. ನಿತ್ಯಘಾತುಕರಾದ ವಿವೇಕಾದಿಗಳು ಇವನ್ನು ಸಹಿಸದೆ, ಜೀವನ ಭೋಗವನ್ನೂ, ಅದನ್ನು ಅಭಿವೃದ್ಧಿಗೊಳಿಸುವ ನಮ್ಮನ್ನೂ ನಾಶಮಾಡುವುದಕ್ಕೆ ಉದ್ಯುಕ್ತರಾಗಿದಾರೆ. ನಮ್ಮ ತಂದೆಯು

ಅನಾದಿ ಕಾಲದಿಂದಲೂ ಅನುಭವಿಸುತ್ತಲಿರುವ ಪ್ರಕೃತಿಯಲ್ಲಿ ಅಲ್ಪವೆಂತಲೂ, ಅಸ್ಥಿರವೆಂತಲೂ ಬಹುವಿಧಗಳಾದ ದೋಷಗಳನ್ನು ಉದ್ಘಾಟಿಸಿ ತಂದೆಗೆ ಅವರಲ್ಲಿ ವೈರಾಗ್ಯ ಹುಟ್ಟುವಂತೆ ಮಾಡಿ, ಯಾವುನಾದರೂ ಒಂದು ಉಪಾಯದಿಂದ ಪ್ರಕೃತಿಯಿಂದ ಬಿಡಿಸಿ, ಪುನಃ ಅವನ ಹೆಸರಿಲ್ಲದಂತೆಯೇ ಮಾಡುವುದಕ್ಕೆ ಪ್ರಯತ್ನಿಸಿರುತ್ತಾರೆ. ಹಾಗೆಯೇ ಮರ್ಕಟಪತಿ ರಾಕ್ಷಸಪತಿಗಳಾದ ಮಹಾಪಾತಕಿಗಳಾದ ಸುಗ್ರೀವ ವಿಭೀಷಣರುಗಳನ್ನು ಕುಲನಾಶದಲ್ಲಿ ಪ್ರಮಾಣವನ್ನಾಗಿ ತೋರಿಸಿರುವರು. ಇವರ ಈ ಆರಂಭದಲ್ಲಿ ತಂದೆಯ ದುರವಸ್ಥೆಯನ್ನು ವರ್ಣಿಸುವುದಕ್ಕಾಗುವುದಿಲ್ಲ. ಈ ನಮ್ಮ ತಂದೆಯಾದ ಜೀವನು ಪರರ ದೋಷಗಳನ್ನು ನೋಡುವುದರಲ್ಲಿ ಜಾತ್ಯಂಧನಾಗಿರಬೇಕು. ಇತರರನ್ನು ದೂಷಿಸುವ ವಿಷಯದಲ್ಲಿ ಮೂಗನಾಗಬೇಕು. ಯಾರಾದರೂ ದೂಷಿಸಿದರೆ ಅದನ್ನು ಕೇಳುವುದರಲ್ಲಿ ಕಿವುಡನಾಗಬೇಕು. ಪರಸ್ತ್ರೀಯರ ವಿಷಯದಲ್ಲಿ ತಾನೂ ಹೆಂಗಸಾಗಬೇಕು. ಈ ಪಾಪಿಷ್ಠರಾದ ವಿವೇಕಾದಿಗಳು ಹೀಗೆ ತಂದೆಗೆ ಬಹು ಕಷ್ಟವನ್ನು ಕೊಡುತ್ತಲಿದ್ದಾರೆ. ಆದ್ದರಿಂದಲೇ ನಾವುಗಳು ಅವರಲ್ಲಿ ಸೌಭ್ರಾತ್ರವನ್ನು ತೊರೆದು, ದುರಾತ್ಮರನ್ನು ನಾಶಮಾಡಬೇಕೆಂದಿದ್ದೇವೆ. ಅಂದಿನಿಂದ ಪ್ರವೃತ್ತಿ ಧರ್ಮವನ್ನು ಆಶ್ರಯಿಸಿ, ನಾವುಗಳೂ ನಿವೃತ್ತಿಧರ್ಮವನ್ನಾಶ್ರಯಿಸಿ, ಅವರುಗಳೂ ಪ್ರಯತ್ನಮಾಡುತ್ತಲಿದ್ದೇವೆ. ಸತ್ವಪ್ರಧಾನವಾದ ವಿವೇಕ ಕುಲವು ಸೂರ್ಯಕಿರಣದಿಂದ ಮಿಂಚಿನ ಹುಳದಂತೆ ನಮ್ಮಿಂದ ತಿರಸ್ಕೃತವಾಗುತ್ತಲಿದೆ. ಹೀಗೆ ಸಹೋದರರೊಳಗೆ ಪ್ರೀತಿಯು ತಪ್ಪಿ, ಮೂಲಭೂತವಾದ ಗುಣಗಳ ಭೇದಕ್ಕೆ ತಕ್ಕಂತೆ ವಿರೋಧವು ದೇವಾಸುರರುಗಳಿಗೆ ಉಂಟಾಗಿರುವಂತೆ ಆಗಿರುವುದು.

ರತಿ—ಅನ್ಯಾಯ! ಅನ್ಯಾಯ! ಮಕ್ಕಳುಗಳೇ ತಂದೆಯ ಸುಖವನ್ನು ನಾಶಮಾಡುವರೇ ? ಒಡಹುಟ್ಟಿದವರೇ ಪರಸ್ಪರ ಧ್ವಂಸಮಾಡುವುದಕ್ಕೆ ಉದ್ಯುಕ್ತರಾಗುವರೇ ? ಆರ್ಯಪುತ್ರನೇ, ನಿಮಗೂ, ಅವರಿಗೂ ಈ ಜಗಳವು ಹೋಗುವಂತೆ ಸಂಧಿಯಾಗಲಾರದೇ ?

ಕಾಮ—ಮುಗ್ಧೆಯೇ, ಈ ವಿಷಯಗಳಲ್ಲಿ ಹೇಗಾದರೂ ಸಂಧಿಗೆ ಸಂಭವವೇ ಇಲ್ಲ. ಸತ್ವವಿಹೀನರಾದ ದುರ್ಜನರಿಗೂ ಸದ್ಭಾವದಿಂದಲೇ ಅಪರಾಧಿಗಳಾದ ಸತ್ಪುರುಷರಿಗೂ, ಸದಸತ್ತುಗಳಿಗೆ ಹೇಗೋ ಹಾಗೆ ಕಲ್ಪಕೋಟಿಗಳು ಮರಳಿದಾಗ್ಯೂ, ಪ್ರತಿಕ್ರಿಯೆಯು ಹೇಗೆ ತಾನೇ ಆಗುವುದು? ಸುತನುವೇ? ಪ್ರತಿ ಪುರುಷರಲ್ಲಿಯೂ ಮಹಾಮೋಹನೇ ಮೊದಲಾದ ನಾವುಗಳೂ, ವಿವೇಕನೇ ಮೊದಲಾದವರೂ ಸಹ ಸೇರಿದವರಾಗಿ ವಧ್ಯರಾಗಿಯೂ, ಘಾತುಕರಾಗಿಯೂ ಆಗುವೆವು. ಅರ್ಥಕಾಮಗಳಲ್ಲಿಯೇ ಆಸಕ್ತರಾಗಿರುವ ನಮ್ಮಗಳಿಗೆ ನಾರಾಯಣ ಪರಾಯಣರೊಂದಿಗೆ ಕಥೆಗಳಲ್ಲಿಯೂ ಸಹ ಸೇರುವುದಕ್ಕೆ ಸಾಧ್ಯವಿಲ್ಲ. ಮತ್ತು ಬಾದು ವೇಳೆ ಹಾಗೆ ಸೇರುವ ಸಂಭವವು ಒದಗಿದಾಗ್ಯೂ, ವೈರಿಗಳನ್ನು ಧ್ವಂಸಮಾಡುವುದರಲ್ಲಿ ಸಮರ್ಥನಾದ ಮಹಾಮೋಹನು ಯಾವ ವಿಧದಲ್ಲಿಯೂ ಸಂಧಿಗೆ ಒಪ್ಪುವುದಿಲ್ಲ. ಅಸಹಾಯವೀರನಾದ ನಾನು ತಾನೇ ಸಂಧಿಗೆ ಹೇಗೆ ಒಪ್ಪಲಿ? ಹಸಿದ ಹುಲಿಯು ಹುಲ್ಲು ತಿನ್ನುವುದುಂಟೇ?

ರತಿ—ಕುಲಗೇಡಿಗಳಾದ ಆ ವಿವೇಕಾದಿಗಳು ಮಹಾ ಬಲಿಷ್ಠರಾದ ನಿಮ್ಮಗಳನ್ನು ನಾಶಮಾಡುವುದಕ್ಕೆ ಯಾವ ಉಪಾಯಗಳನ್ನು ಯೋಚಿಸಿರುವರು?

ಕಾಮ—ಇದು ರಾಜ ರಹಸ್ಯವು. ಹೊರಪಡಿಸತಕ್ಕದ್ದಲ್ಲ. ಅದರೊಳಗೂ ಹೆಂಗಸರಲ್ಲಿ ಹೇಳಲೇ ಕೂಡದು.

ರತಿ—ಆರ್ಯಪುತ್ರನೇ, ನನ್ನ ಮೇಲೆ ಆಣೆಯಿದೆ. ಮತ್ತು ರಾಜ ರಹಸ್ಯವನ್ನು ಹೇಳದೇ ಹೋದರೆ, ಪ್ರಿಯಸಖನಾದ ವಸಂತನ ಮೇಲಾಣೆ.

ವಸಂತ—(ತನ್ನಲ್ಲಿ ತಾನು) ಇದನ್ನು ಹೇಗೆ ವಿವರಿಸುವುದು? ಕಾಲನಿಯಮವಿಲ್ಲದ ಭಾಗ್ಯವ್ಯತ್ಯಾಸವು ಪರಿಹರಿಸಿಕೊಳ್ಳುವುದಕ್ಕೆ ಆಗುವುದಿಲ್ಲ. (ಪ್ರಕಾಶವಾಗಿ) ಪ್ರಿಯಸಖನೇ, ಮನಸ್ಸಿನಲ್ಲಿ ಆಲೋಚಿಸುವುದರಲ್ಲಿ ಮಾತ್ರ ಸಮರ್ಥರಾಗಿ, ಕಾರ್ಯದಲ್ಲಿ ಅಸಮರ್ಥರಾಗಿರುವ ಶತ್ರುಗಳ ರಹಸ್ಯವನ್ನು ವಿರೋಧಿಗಳಾದ ನಾವುಗಳು ಹೊರಪಡಿಸಲೇ ಬೇಕು.

ಕಾಮ—ಪ್ರಿಯಳೇ, ಹೇಳುವೆನು, ಕೇಳು. ಮೂಢರ ಕುಲಕ್ಕೆ ಸಾರ್ವ

ಭೌಮನಾದ ವಿವೇಕನನ್ನು ಆಶ್ರಯಿಸಿ, ತನಗೆ ಕರ್ತೃತ್ವವಿಲ್ಲವೆಂತಲೂ, ಕರ್ಮಫಲಸಂಗವನ್ನು ತ್ಯಾಗಮಾಡಬೇಕೆಂತಲೂ ನಾನಾವಿಧವಾದ ವಿಕ್ಷಮಾನುಷ್ಠಾನದಿಂದ ಸೇರಿ, ನಮ್ಮ ಕುಲನಾಶವನ್ನಪೇಕ್ಷಿಸಿ, ವಿಸ್ತಾರವಾದ ಉಪನಿಷತ್ತುಗಳಲ್ಲಿ ಆಸಕ್ತರಾದ ಕೆಲ ಕ್ರೂರ ಜನರು ನಿವೃತ್ತಿ ಎಂಬ ಧರ್ಮವನ್ನು ಅನುಷ್ಠಾನ ಮಾಡುತ್ತಿರುವರು. ಈ ನಿವೃತ್ತಿ ಧರ್ಮದಲ್ಲಿ ನಿಷ್ಠನಾದ ಪುರುಷನು ಇತರರ ದೋಷವೇ ಮೊದಲಾದವುಗಳನ್ನು ನೋಡುವುದರಲ್ಲಿಯೂ, ಹೇಳುವುದರಲ್ಲಿಯೂ, ಕೇಳುವುದರಲ್ಲಿಯೂ, ಕುರುಡನಂತೆಯೂ, ಮೂಗನಂತೆಯೂ, ಕಿವುಡನಂತೆಯೂ, ಪರಸ್ತ್ರೀಯರ ವಿಷಯದಲ್ಲಿ ನಪುಂಸಕನಂತೆಯೂ ಬಹು ಕ್ಷೀಣವಾದ ಅವಸ್ಥೆಯನ್ನು ಹೊಂದುವನು. ಅಂತಹ ಪ್ರತಿಕ್ರಿಯೆಯೇ ಇಲ್ಲದಿರುವ ನಿವೃತ್ತಿ ಧರ್ಮವು ಪಿಶಾಚದಂತೆ ಜೀವಾತ್ಮನನ್ನು ಆವರಿಸಿಕೊಳ್ಳುವುದು. ಆ ಪಿಶಾಚದ ಆವೇಶದಿಂದ ಕೂಡಿದ ಜೀವನು ಬುದ್ಧಿಯೊಂದಿಗೆ ಸೇರುವನು. ಆ ಸಂಗಮದಿಂದ ನಮ್ಮ ಕುಲವನ್ನು ದ್ವೇಷಿಸುವ ಪ್ರಶಾಂತವಾಗಿಯೂ, ಮಧುರವಾಗಿಯೂ ಇರುವ ವೇಷದಿಂದ ಕೂಡಿದ ಪರಭಕ್ತಿ ಎಂಬ ಬ್ರಹ್ಮರಾಕ್ಷಸಿಯು ಸಂಸಾರ ಸುಖಾನುಭವಕ್ಕೆ ಅಪಮೃತ್ಯುಪ್ರಾಯಳಾಗಿ ಹುಟ್ಟುವಳು. ಈ ರೀತಿಯಲ್ಲಿ ಸತ್ವರಜಸ್ತಮೋಗುಣಗಳ ಉತ್ಪತ್ತಿ ಕ್ರಮದಿಂದ ಅನಂತ ವಿಕಾರಗಳಿಗೆ ವಶಳಾದ ನಮ್ಮ ಉಭಯ ಕುಲಕ್ಕೂ ಕೂಟಸ್ಥನಾದ ಜೀವಾತ್ಮನ ಪತ್ನಿಯಾದ ಬುದ್ಧಿಯು ಭಗವತ್ಕಟಾಕ್ಷದಿಂದ ಉಂಟಾದ ಆಚಾರ್ಯಾನುಗ್ರಹವನ್ನು ಪಡೆದ ಕಾಲದಲ್ಲಿ ಅತ್ಯಂತ ಕ್ರೂರಳಾಗಿ, ಮೋಕ್ಷವಿಧಿಯಲ್ಲಿ ದುರಾಲೋಚನೆಯಿಂದ ನಿಷ್ಠುರಳಾದ ಪರಭಕ್ತಿಯನ್ನು ಪರಾಧೀನಳಾಗಿ ಹೆರುವಳು. ಹೀಗೆ ಹುಟ್ಟಿದ ಪರಭಕ್ತಿಯು ಪರಮಪುರುಷನಲ್ಲಿ ಪತಿವ್ರತಾಭಾವವನ್ನು ವಹಿಸಿ, ಸರ್ವೇಂದ್ರಿಯಗಳನ್ನೂ ನಿಗ್ರಹಿಸಿ ವಿಷಯ ವೈರಾಗ್ಯವನ್ನು ಹೊಂದಿ, ಘೋರವಾದ ಉಪಾಸನಾರೂಪವಾದ ತಪಸ್ಸನ್ನು ಮಾಡುವಳು. ಆ ತಪಸ್ಸಿನಿಂದ ಭಗವಂತನ ಕೃಪೆಯು ಸಂತೋಷಪಟ್ಟು ಕೋಟಿಕೈಟಭರಿಗೆ ಸಮಾನನಾದ ಪರಾಕ್ರಮವುಳ್ಳ ಒಬ್ಬ ಅಸುರನನ್ನು ಪರಭಕ್ತಿಕಿಂಕರನನ್ನಾಗಿ ಮಾಡುವುದು (ಎಂದು ನಾಚಿಕೆಯಿಂದ ಸುಮ್ಮನಾಗುವನು.)

ವಸಂತ—(ತನ್ನಲ್ಲಿ ತಾನು) ಅವನೇ ಸಂಕಲ್ಪಸೂರ್ಯೋದಯನು. ಇವನು ನಮ್ಮನ್ನು ನಿರ್ಮೂಲನ ಮಾಡುವನು. ಇನ್ನೊಂದು ವಿಧವಾಗಿ ಪೂರ್ತಿಮಾಡುವೆನು. (ಪ್ರಕಾಶವಾಗಿ) ಉಳಿದದ್ದು ಹೇಳುವುದಕ್ಕಾಗುವುದಿಲ್ಲ.

ರತಿ—(ಭಯದಿಂದ) ನಾಥನೇ ಕಾಪಾಡು, ಕಾಪಾಡು.

ಕಾಮ—ಪ್ರಿಯಳೇ, ಮಹಾಮೋಹನ ಸೈನಿಕರಲ್ಲಿ ಧುರಂಧರನಾದ ನನ್ನ ಪತ್ನಿಯಾದ ನಿನಗೇನು ಹೆದರಿಕೆ? ಹೆದರಬೇಡ. ಇದು ಇಂದ್ರಜಾಲ ವಿದ್ಯೆಯನ್ನು ತಿಳಿದವರು ಪಟ್ಟಣವನ್ನು ಬಟ್ಟಗೆ ನುಂಗುವಂತೆ ಜಡಮತಿಗಳಾದ ವೈದಿಕರಲ್ಲಿ ಏರ್ಪಡಿಸಲ್ಪಟ್ಟ ಬಂದು ಐತಿಹ್ಯವು. ನೋಡು. ಪರಸ್ತ್ರೀಯರನ್ನು ಬಲಾತ್ಕರಿಸಿ, ಅನುಭವಿಸುವುದು ದುರ್ನಡತೆಯೆಂದು ತಾವು ನಿಂದಿಸುತ್ತಾ, ಇಂದ್ರಚಂದ್ರನೇ ಮೊದಲಾದವರು ಅಹಲ್ಯೆಯಲ್ಲಿಯೂ, ತಾರೆಯಲ್ಲಿಯೂ ತಾವೇ ವ್ಯಾಚಾಮಗೋಚರವಾಗಿ ತಪ್ಪಿ ನಡೆದಿರುವರು. ಧ್ವನಿಮಾಡುವ ಭ್ರಮರಗಳೇ ಹೆದೆಯಾಗಿವುಳ್ಳ ನನ್ನ ಧನಸ್ಸು ಸ್ವಲ್ಪ ಬಾಗಿದರೆ, ವೈರಾಗ್ಯದ ಹೊಸಲನ್ನು ತಾನೇ ಕುತೂಹಲವುಳ್ಳವನಾಗಿ ನೋಡುವವನು ಯಾರು? ಮಹಾ ಬಲಿಷ್ಠರಾದ ಮಂತ್ರಿಗಳು ಹಾಗಿರಲಿ. ಪ್ರಮಾದ, ಆಲಸ್ಯ, ನಿದ್ರೆ, ಸಂಶಯ, ಮೊದಲಾದ ನಾನಾವಿಧವಾದ ಅವಯವಗಳುಳ್ಳ ಜ್ಞಾನವನ್ನು ಆಚ್ಛಾದನ ಮಾಡುವ ಸ್ವಭಾವವುಳ್ಳ ಮೋಹನು ಹೇಗೆ ತಾನೇ ಜಯಶೀಲನಾಗುವನು?

ರತಿ—ದೌರ್ಭಾಗ್ಯದಿಂದ ಆರ್ಯಪುತ್ರನು ವಿಪರೀತವಾಗಿ ಹೇಳುವನು. ಮಹಾರಾಜನಿಗೆ ಮಂಗಳವಾಗಲಿ.

ವಸಂತ—ಎಲೌ ಮನ್ಮಥಪತ್ನಿಯೇ, ಹೆದರಬೇಡ. ಮೋಹಾದಿಗಳು ಸಂಸ್ಥಿತರಾದರೆ ಪುರುಷನು ಪ್ರಕೃತಿಯನ್ನು ಹೊಂದಲಪೇಕ್ಷೆಯುಳ್ಳವನಾಗಿ ವಿರಕ್ತಿಯಿಂದ ಮುಕ್ತಿಯನ್ನು ಪಡೆಯುವನು.

---

1 ಸಂಸ್ಥಿತರಾದರೆ ಸತ್ತುಹೋದರೆ ದೃಢವಾಗಿ ನಿಂತರೆ.

2 ವಿರಕ್ತಿಯನ್ನು ಬಿಟ್ಟುಬಿಡುವನು ವೈರಾಗ್ಯವನ್ನು ಹೊಂದಿ ಮೋಕ್ಷವನ್ನು ಪಡೆಯುವನು.

3 ಪ್ರಕೃತಿ ಮೂಲಪ್ರಕೃತಿ; ಸ್ವಭಾವ.

ರತಿ—(ತನ್ನಲ್ಲಿ ತಾನು) ವಸಂತನ ಮಾತೂ ಸಹ ವಿಪರೀತವಾಗಿಯೇ ಕಾಣುತ್ತದೆಯಲ್ಲ ! (ಪ್ರಕಾಶವಾಗಿ) ಆರ್ಯಪುತ್ರನೇ, ಜೀವಕನಿಗೆ ವಿವೇಕವಿಲ್ಲವೇ ? ಅವನ ಮಂತ್ರಿಗಳಾದ ಶಮ, ದಮ, ಮೊದಲಾದವರಿಗೂ ವಿವೇಕವಿಲ್ಲವೋ ? ಪುರುಷನು ಪ್ರಕೃತಿಯನ್ನು ಬಿಟ್ಟು ಹೋದರೆ, ನಮ್ಮಂತೆ ಅವರೂ ನಾಶವಾಗುವುದಿಲ್ಲವೇ ?

ಕಾಮ—ನಿಜ. ನಮ್ಮ ಅಭಿವೃದ್ಧಿಯನ್ನು ಸಹಿಸದ ಪಾಪಿಗಳಾದ ವಿವೇಕಾದಿಗಳು ಜೀವನ ವಿಷಯದಲ್ಲಿ ಕುಲಕ್ಷಯನಾಶಕವಾದ ವಂಚನೆಯನ್ನು ಯಾರಿಗೂ ತಿಳಿಯದಂತೆ ಮಾಡುತ್ತಲಿರುವರು. ಸರ್ವ ಪ್ರಕಾರದಿಂದಲೂ ಮೂಢರಾದ ಇವರ ಉದ್ಯೋಗವೆಲ್ಲವೂ ವ್ಯರ್ಥವೇ ಆಗುವುದು. ಏಕೆಂದರೆ ಯುದ್ಧದಲ್ಲಿ ಮೃತರಾದಾಗ್ಯೂ ಕೂಡ ಸುಗ್ರೀವ ಸುಭಟರಾದ ವಾನರರಂತ ಕರ್ಮಶಕ್ತಿಯ ಬಲದಿಂದ ಮಹಾಮೋಹಾದಿಗಳು ಪುನಃ ಬದುಕುವರು. (ತೆರೆಯಲ್ಲಿ) ವಿಪರೀತ ಜ್ಞಾನವುಳ್ಳ ಈತನು ಯಾರು ? ತಂದೆಗೆ ಅನುಕೂಲ್ಯವನ್ನು ಮಾಡುವುದರಲ್ಲಿ ಆಸಕ್ತರಾಗಿರುವ ನಮ್ಮಗಳನ್ನೇ ಪಾಪಿಗಳೆಂದು ಹರಟುವನು. ಎಲೈ ದುರಾಚಾರಿಯೇ, ದುರ್ವಿನೀತನೇ, ಅಳ್ಳಾಡದಂತೆ ಶೃಂಖಲೆಯಿಂದ ಜೀವಾತ್ಮನನ್ನು ಬಂಧಿಸಿ, ಕ್ರೂರ ಸ್ವಭಾವವುಳ್ಳ ನಿಮ್ಮಗಳನ್ನು ನಿರಸನ ಮಾಡುವುದರಲ್ಲಿಯೂ, ಕೂಟಸ್ಥನಾದ ಜೀವನ ಸಮಸ್ತ ದುಃಖಗಳನ್ನೂ ಹೋಗಲಾಡಿಸಿ, ನಿರತಿಶಯಾನಂದವನ್ನು ಉಂಟುಮಾಡುವುದರಲ್ಲಿಯೂ, ಮುಕ್ತಿದೆಸೆಯಲ್ಲಿಯೂ ಕೂಡ ಪುರುಷನ ಬುದ್ಧಿಯಲ್ಲಿ ಅನುಪ್ರವೇಶ ಮಾಡಿ, ನಮ್ಮ ಕುಲವನ್ನು ಬದುಕಿಸುವುದರಲ್ಲಿಯೂ ಸಹ ಭಗವಂತನ ಕೃಪಾಕಟಾಕ್ಷಕ್ಕೆ ಪಾತ್ರರಾಗಿರುವ ನಾವುಗಳು ಪ್ರವರ್ತಿಸುತ್ತಲಿದೇವೆ. ಉಪನಿಷತ್ತುಗಳು ಹೀಗೆ ಹೇಳುವುವು.

ಪ್ರಭುವಾದ ಭಗವಂತನು ಕರ್ಮಾನುಗುಣವಾದ ಫಲವನ್ನು ಕೊಡುವುದರಿಂದ ಸಂಸಾರವೆಂಬ ನಾಟ್ಯದಲ್ಲಿ ಚಾತುರ್ಯವನ್ನು ತೋರಿಸುವ ಈ ಜೀವಾತ್ಮನು ಭಾಗವತ ವೇಷವನ್ನು ಪರಿಗ್ರಹಿಸುವ ಮಾತ್ರದಿಂದಲೇ ಸಂತುಷ್ಟನಾಗಿ, ಶ್ರೀವತ್ಸ ಕೌಸ್ತುಭಾದಿ ತನ್ನ ಅಸಾಧಾರಣ ಚಿಹ್ನೆಗಳು

ಹೊರತು ಉಳಿದ ಅಪಹತ ಪಾಪ್ಮತ್ವಾದಿ ಚಿಹ್ನೆಗಳನ್ನು ಉಂಟುಮಾಡಿ, ಜೀವಾತ್ಮನಿಗೆ ತನ್ನ ಸಾಮ್ಯವನ್ನು ಕೊಡುವನು. ಇದೂ ಅಲ್ಲದೆ, ಶತ್ರು ಸಂಹಾರವನ್ನು ಮಾಡಿದ್ದರಿಂದ ಅಧಿಕವಾದ ಯಶಸ್ಸೂ ತಂದೆಯನ್ನು ಕಾಪಾಡುವುದರಿಂದ ಪುಷ್ಕಲವಾದ ಧರ್ಮವೂ, ಇಷ್ಟಸಾಧನದಿಂದ ಸಂತೋಷವೂ ಸಹ ನಿಟಗೆ ಉಂಟಾಗುವುವು.

ಕಾಮ—(ಭಯದಿಂದ ತಿರುಗಿ ನೋಡಿ) ಪ್ರಿಯಳೇ, ಮೋಹನ ಶತ್ರುಪಕ್ಷದಲ್ಲಿ ಮೂರ್ಧಾಭಿಷಿಕ್ತನಾದ ಈ ನಮ್ಮ ಶತ್ರುವು ಸಹಧರ್ಮಚಾರಿಣಿಯಾದ ಸುಮತಿಯೊಂದಿಗೆ ಬರುತ್ತಿರುವನು. ಇವನು ಖ್ಯಾತಿ, ಲಾಭ, ಪೂಜೆ, ಇವುಗಳ ವಿಷಯದಲ್ಲಿ ಅಪೇಕ್ಷೆಯಿಲ್ಲದೇ ಇರುವನ್ನು ಮೋಹಧ್ವಂಸವನ್ನು ಅಪೇಕ್ಷಿಸುತ್ತಾ, ವೇದಾಂತಗಳನ್ನು ವಿಚಾರಮಾಡುತ್ತಿರುವನು. ಮೋಕ್ಷಧರ್ಮಗಳನ್ನು ಯೋಚಿಸುತ್ತಲಿರುವನು. ಅನನ್ಯಭಕ್ತಿಯಿಂದ ಗೀತೆಯನ್ನು ನಿತ್ಯವೂ ಕೇಳುತ್ತಿರುವನು. ಶಮದಮಾದಿ ಗುಣಗಳನ್ನು ಗ್ರಹಿಸಿರುವನು. ಮಂತ್ರಗೋಪನವನ್ನು ಮಾಡಿಕೊಂಡಿರುವನು. ಈ ವಿವೇಕನು ಸೂರ್ಯನಂತೆ ಪ್ರತಙ್ಮುಖವಾದ ಅಂದರೆ ಪರಾವರ ತತ್ವಾಭಿಮುಖನಾದ ಮತ್ತು ಪಶ್ಚಿಮಾಭಿಮುಖನಾದ ಸುಮತಿಯು ಕಾಂತಿಯನ್ನು ಈ ಸಂಸಾರದಲ್ಲಿ ಹರತುವಂಥಾವನಾಗಿ ಉದಯುವನ್ನು ಹೊಂದಿ ಅಂದರೆ ಆತ್ಮಪ್ರಕಾಶವನ್ನು ಹೊಂದಿ, ಅಪರಿಮಿತವಾದ ರಾಗಬಲದಿಂದ ಕೂಡಿದವನಾಗಿ, ಅಹಂಕಾರವನ್ನು ಶಮನ ಮಾಡುವಂಥಾವನಾಗಿ, ವಿಷ್ಣುಪದವನ್ನು ಅಂದರೆ, ಆಕಾಶವನ್ನು ಭಗವಂತನ ಚರಣವನ್ನು ಹೊಂದುತ್ತಾನೆ. ಆದ್ದರಿಂದ ಸಮಯವೂ ಇಲ್ಲದೆ, ಅಸಮಯದಲ್ಲಿ ಶತ್ರುವಿಗೆ ಕಾಣಿಸಿಕೊಳ್ಳುವುದು ಉಚಿತವಲ್ಲ (ಎಂದು ಮಿತ್ರಕಳತ್ರರೊಂದಿಗೆ ಹೊರಟು ಹೋಗುವನು) (ರಾಜನೂ, ಸುಮತಿಯೂ ಪ್ರವೇಶಿಸುವರು)

ರಾಜ—(ವಿಚಾರ ಮಾಡುತ್ತಾ) ಪ್ರಿಯಳೇ, ದುರಿತ ವಿಷವನಕ್ಕೆ ಮೂಲಭೂತನಾದ, ಅತ್ಯಂತ ಗರ್ವವುಳ್ಳ ಕಂದರ್ಪ ವಟುವಿನ ಆಟೋಪವನ್ನು ಕೇಳಿದೆಯಾ? ಇವನು ಸಮಸ್ತ ಪಾಪಗಳನ್ನೂ ನಾಶಮಾಡುವುದರಲ್ಲಿ ಉದ್ಯುಕ್ತರಾಗಿರುವ ನಮ್ಮನ್ನೇ ಪಾಪಿಗಳೆಂದು ದೂಷಿಸುವ

ನು ಅಥವಾ ಜನಗಳು ಇತರರಲ್ಲಿ ಇಲ್ಲದ ದೋಷಗಳನ್ನು ಕಾಣುವರು. ಇರುವ ಗುಣಗಳನ್ನು ನೋಡುವುದೇ ಇಲ್ಲ. ತಮ್ಮಲ್ಲಿಯೋ ಅಂದರೆ ತಮ್ಮ ದೋಷಗಳನ್ನು ನೋಡುವುದೇ ಇಲ್ಲ. ಇಲ್ಲದೇ ಇರುವ ಗುಣಗಳನ್ನು ತಮ್ಮಲ್ಲಿ ಇರುವಂತೆ ಭಾವಿಸುವರು. ಇದು ಮೋಹಾಂಜನದ ಮಹಿಮೆಯು.

ಸುಮತಿ—ಆರ್ಯಪುತ್ರನೇ, ಕುರೂಪಿಗಳಾದ ಜನಗಳು ತಮ್ಮ ಮುಖವು ಸೊಟ್ಟಗಿದ್ದರೆ, ನಿರ್ಮಲವಾದ ಕನ್ನಡಿಯನ್ನು ಬಯ್ಯುವರು.

ರಾಜ—ದೇವಿಯೇ, ನಿಜವಾದ ಮಾತು ಹೇಳಿದೆ. ನೀನು ಸಮಸ್ತ ದೋಷಗಳಿಂದ ಬಿಡಲ್ಪಟ್ಟವಳಾಗಿಯೂ, ನಿರಪಾಧಿಕವಾದ ಪುರುಷಾರ್ಥವನ್ನು ಉಂಟುಮಾಡುವುದರಲ್ಲಿ ಆಸಕ್ತಳಾಗಿಯೂ, ಗುಣ, ಅಲಂಕಾರ, ಭಾವ, ರಸ ಇವುಗಳಿಂದ ಕೂಡಿಕೊಂಡಿರುವ ಕಾರಣ, ಶ್ರೇಷ್ಠರಾದ ಕವಿಗಳ ವಚನವಂತೆ ಪ್ರಕಾಶಿಸುತ್ತಿದ್ದೀಯೆ. (ಹಾಗೆಯೇ ಯೋಚಿಸಿ) ಪ್ರಿಯಳೇ, ವಿಕಾರರಹಿತನಾದ ಜೀವನಿಗೆ ಹಿಂಸೆಯನ್ನುಂಟುಮಾಡುವುದೇ ಆಟವಾಗಿಯುಳ್ಳ ಕಾಮಕ್ರೋಧ ಲೋಭಾದಿಗಳು ಸನ್ಮಾರ್ಗದಲ್ಲಿ ರತಕ್ಕವರು; ಪುರುಷನನ್ನು ಮೋಕ್ಷದಲ್ಲಿ ಸೇರಿಸುವುದಕ್ಕಾಗಿ ಎಲ್ಲರಲ್ಲಿಯೂ ಸಹಜ ಸ್ನೇಹವುಳ್ಳವರಾಗಿ ಭಗವಂತನ ದಯಾದೃಷ್ಟಿಯನ್ನು, ತಾಪತ್ರಯದಿಂದ ಪೀಡಿತರಾದ ಸರ್ವಜನರಿಗೂ ಸಂಜೀವಿನಿಯಾಗಿರುವುದನ್ನು ಹೊಂದಿರುವ ನಾವುಗಳು ಕೆಟ್ಟ ಮಾರ್ಗದಲ್ಲಿರತಕ್ಕವರು. ಈ ಹುಚ್ಚು ಕೂಗಿಗೆ ಏನು ಹೇಳೋಣ. ನಿನ್ನೊಂದಿಗೆ ಅನುಷ್ಠಿಸಬೇಕಾದ ಪರಾನುಗ್ರಹ ವ್ರತವನ್ನು ಕೇಳು. ಜೀವಾತ್ಮನು ಮಹಾಮೋಹಾದಿಗಳಿಂದ ಬಹು ಕ್ಲೇಶವನ್ನು ಅನುಭವಿಸುತ್ತಿರುವನು. ಅವನಿಗೆ ಈ ಕ್ಲೇಶವನ್ನು ಬಿಡಿಸಿ, ಪರಮ ಪುರುಷಾರ್ಥವಾದ ಮೋಕ್ಷವನ್ನು ಉಂಟುಮಾಡಬೇಕು. ಸಮಾಧಿನಿಷ್ಠನಾದ ಹೊರತು, ಅದು ಸಿದ್ಧಿಸುವುದಿಲ್ಲ. ಆ ಸಮಾಧಿಯು ಸ್ಥಿರವಾಗಬೇಕಾದರೆ, ಅಂತಶ್ಶತ್ರುಗಳನ್ನೂ, ಬಾಹ್ಯ ಶತ್ರುಗಳನ್ನೂ ದೂರಮಾಡಬೇಕು. ನಾನಾವಿಧವಾದ ಮತಗಳ ಆಡಂಬರದಿಂದ ಜೀವಾತ್ಮನು ಭ್ರಾಂತನಾಗಿ, ಉಪಾಸನೆಯಲ್ಲಿ ಸ್ಥಿರ

ನಾಗುವುದಿಲ್ಲ. ಆದ್ದರಿಂದ ಈ ಭ್ರಾಂತಿಯನ್ನು ತೊಲಗಿಸಿ, ಅಂತಃಶತ್ರುಗಳಾದ ಕಾಮಕ್ರೋಧಾದಿಗಳನ್ನು ಬಿಡಿಸಬೇಕಾದ ದೊಡ್ಡ ಉದ್ಯೋಗವನ್ನು ಮಾಡಬೇಕಾಗಿದೆ. ಈ ಮಹತ್ತಾದ ಕಾರ್ಯಾರಂಭದಲ್ಲಿ ಶ್ರೀಮನ್ನಾರಾಯಣನ ಕರುಣೆಯು ಪೂರ್ಣವಾಗಿರುವುದೆಂದು ನಂಬಿ ಧೈರ್ಯದಿಂದ ಪ್ರವರ್ತಿಸಿರುವೆನು.

ಸುಮತಿ—ಆರ್ಯಪುತ್ರನೇ, ಜೀವಾತ್ಮನು ನಿತ್ಯನು, ನಿರ್ಮಲನು, ಮಹಾನಂದ ಸ್ವಭಾವನು, ಸ್ವಯಂ ಪ್ರಕಾಶನು. ಈ ವಿಧವಾದ ಜೀವಾತ್ಮನು ದುಃಖಸಾಗರದಲ್ಲಿ ಹೇಗೆ ಬಿದ್ದನು ? ಮಾನ, ಮದ, ಮತ್ಸರ, ಮೊದಲಾದ ದುಷ್ಟರೊಡನೆ ಸೇರಿದ ಮಹಾಮೋಹನು ತಾನೇ ಬಹು ದೋಷದೂಷಿತವಾದ, ಘೋರವಾದ ಆ ದುಃಖಸಮುದ್ರದಲ್ಲಿ ಹೇಗೆ ಹಾಕಿದನು ?

ರಾಜ—ಸೂಕ್ಷ್ಮವಿಚಾರದಲ್ಲಿ ಸಮರ್ಥಳಾದ ಪ್ರಿಯಳೇ, ಪ್ರತ್ಯಕ್ಷಾನುಭವದಲ್ಲಿರುವ ಸಂಸಾರವನ್ನು ಹೇಗೆ ಸುಳ್ಳೆಂದು ಹೇಳಬಹುದು ? ವೇದಾಂತಸಿದ್ಧವಾದ ಮೋಕ್ಷವನ್ನೂ ಕೂಡ ಸುಳ್ಳೆಂದು ಹೇಳುವುದು ಯುಕ್ತವಲ್ಲ. ನೋಡು, ಲೋಕದಲ್ಲಿ ಸ್ಫಟಿಕಮಣಿಯು ಶುದ್ಧವಾಗಿಯೂ, ನಿರ್ಮಲವಾಗಿಯೂ ಇರುವುದು. ಅದಕ್ಕೆ ಜಪಾಕುಸುಮದ ಸಂಬಂಧವುಂಟಾದರೆ, ತನ್ನ ಸ್ವಭಾವವನ್ನು ತೊರೆದು, ಕೆಂಪು ಬಣ್ಣವುಳ್ಳದ್ದಾಗುವುದು. ಆ ಜಪಾಕುಸುಮದ ಸಂಬಂಧವನ್ನು ದೂರ ಮಾಡಿದರೆ, ಆ ಸ್ಫಟಿಕಮಣಿಯು ಪೂರ್ವದ ಸ್ಥಿತಿಯನ್ನೇ ಹೊದುವುದು. ಹೀಗೆಯೇ ಜೀವಾತ್ಮನು ಕರ್ಮರೂಪವಾದ ಅವಿದ್ಯೆಯ ಸಂಬಂಧವನ್ನು ವಹಿಸಿ, ತನ್ನ ಸ್ವರೂಪವನ್ನು ತೊರೆದು, ಸಂಸಾರವನ್ನನುಭವಿಸುವನು. ಪರಮಪುರುಷನಾದ ನಾರಾಯಣನ ಅನುಗ್ರಹದಿಂದ ಕರ್ಮವು ಕ್ಷಯವಾದರೆ, ಸಂಸಾರವಿನಿರ್ಮುಕ್ತನಾಗಿ ತನ್ನ ಸ್ವರೂಪವನ್ನೇ ಹೊಂದುವನು. ಆದ್ದರಿಂದ ಸಂಸಾರವೂ ಮಿಥ್ಯೆಯಲ್ಲ. ಜೀವಾತ್ಮನ ನಿತ್ಯನಿರ್ಮಲತ್ವವೂ ಮಿಥ್ಯೆಯಲ್ಲ.

ಸುಮತಿ—ಹಾಗಾದರೆ ಲಕ್ಷ್ಮೀಪತಿಯಾದ ನಾರಾಯಣನು ಪರಮ ಕರುಣಾಶಾಲಿಯಾಗಿದ್ದೂ ಕೂಡ ದುಸ್ಸಹವಾದ ಅನೇಕ ದುಃಖಗಳಿಂದ ಸಂ

ಕಟಪತುತ್ತಲಿರುವ ಜೀವಾತ್ಮನನ್ನು ಇದುವರೆಗೂ ಏಕೆ ಉಪೇಕ್ಷೆ ಮಾಡಿರುವನು ?

ರಾಜ—.ಅನಾದಿಯಾಗಿ ಮಾತಲ್ಪಟ್ಟ ಕರ್ಮರೂಪವಾದ ಅವಿದ್ಯೆಯಿಂದ ಜೀವಾತ್ಮನು ಅದೇ ನಾರಾಯಣನಿಂದ ಸಂಸಾರದಲ್ಲಿ ಹಾಕಲ್ಪಟ್ಟಿರುವನು. ಯಾದೃಚ್ಛಿಕವಾದ ಸುಕೃತಮೂಲಕವಾಗಿ ಸಂರಕ್ಷಿಸುವ ಕಾಲ ಬದಗಿದಾಗ, ಅದೇ ನಾರಾಯಣನು ಇವನನ್ನು ಉದ್ಧರಿಸುವನು. ಹೇಗೆಂದರೆ ಭಗವಂತನ ಲೀಲೆಯು ಜೀವಾತ್ಮನಿಗೆ ಸಂಸಾರದ ಸಂಬಂಧವನ್ನು ಉಂಟುಮಾಡಬೇಕೆಂತಲೂ, ಭಗವಂತನ ದಯೆಯು ಜೀವಾತ್ಮನನ್ನು ಸಂಸಾರದಿಂದ ಉದ್ಧರಿಸಬೇಕೆಂತಲೂ ಪರಸ್ಪರವಾಗಿ ಕಲಹ ಮಾಡುತ್ತಿರುವರು. ನಾರಾಯಣನು ಇವರಿಬ್ಬರ ಕುತೂಹಲಕ್ಕೂ ಪರವಶನಾಗಿ, ಪ್ರಸಂಗ ಸಂಗತಿಯಿಂದ ಮೀನು ಹಿಡಿಯುವ ಬೆಸ್ತನು ಗ್ರಹಣ ಹಿಡಿದ ಕಾಲದಲ್ಲಿ ನೀರಿನಲ್ಲಿ ಮುಳುಗಿದಂತೆಯೂ ಘುಣ ಎಂಬ ಹುಳವು ಮರವನ್ನು ತನ್ನ ಕೊಕ್ಕಿನಿಂದ ಕುಟ್ಟುತ್ತಾ, ಅದರಲ್ಲಿ ಅಕ್ಷರ ರೇಖೆಯುಂಟಾಗುವ ಘುಣಾಕ್ಷರನ್ಯಾಯದಂತೆಯೂ, ಯಾದೃಚ್ಛಿಕವಾಗಿಯೂ ಮಾಡಿದ ಸುಕೃತವನ್ನು ದೊಡ್ಡದಾಗಿ ಭಾವಿಸಿ, ಸಾಪರಾಧಿಗಳಾದ ಜೀವಾತ್ಮರುಗಳನ್ನು ಕಾಪಾಡುವನು. ಇದರಲ್ಲಿ ನದಿಗಳಂತೆ ಹರಿಯುವ ಸುಖದುಃಖಗಳನ್ನು ವ್ಯತ್ಯಾಸ ಮಾಡುವುದಕ್ಕಾಗಲೀ, ಬದಲಾಯಿಸುವುದಕ್ಕಾಗಲೀ, ಹೋಗಲಾಡಿಸುವುದಕ್ಕಾಗಲಿ ಸಾಧ್ಯವಿಲ್ಲದೆ ಅನುಭವದಿಂದಲೇ ಪರಿಹರಿಸಿಕೊಳ್ಳಬೇಕಾಗಿರುವುದರಿಂದ, ಪ್ರವಾಹದಂತೆ ಕ್ರಮತಪ್ಪದೆ, ಅವಿಚ್ಛಿನ್ನವಾಗಿರುವ ಈ ಸುಖದುಃಖಗಳಲ್ಲಿ ಬಿದ್ದಿರುವ ಜೀವಾತ್ಮನನ್ನು ಸುಕೃತವ್ಯಾಜವನ್ನಿಟ್ಟು, ಉದ್ಧಾರ ಮಾಡಿ, ನಾರಾಯಣನು ಸಂತೋಷಿಸುವನು. ಇದರಿಂದ ಜೀವಾತ್ಮನು ಬುದ್ಧಿಪೂರ್ವಕವಾದ ಸುಕೃತವನ್ನು ಮಾಡದಿದ್ದರೂ, ತಾನಾಗಿ ಒದಗಿದ ಸುಕೃತವು ಸುಕೃತವಾಗದೇ ಇರುವುದಿಲ್ಲ. ಕಪಿಯು ಮಣ್ಣು ಹೆಂಟೆಯಂತೆ ಒಂದು ಮಣಿಯನ್ನು ತನ್ನ ತಲೆಯಲ್ಲಿಟ್ಟುಕೊಂಡರೆ, ಅದು ಅಲಂಕಾರವಾಗದೆ ಹೋಗುವುದಿಲ್ಲ.

ಸುಮತಿ—ಆರ್ಯಪುತ್ರನೇ, ಎಷ್ಟೋ ಕಾಲಗಳು ಕಳೆದುಹೋದವು ಮುಂದೆಯೂ ಕೂಡ ಅನೇಕ ಕಾಲಗಳು ಕಳೆಯಬೇಕಾಗಿವೆ. ಇದುವರೆಗೂ ದೊರೆಯದೇ ಇದ್ದ ಮೋಕ್ಷವು ಮುಂದೆ ತಾನೇ ಹೇಗೆ ದೊರೆಯುವುದೆಂದು ನನ್ನ ಮನಸ್ಸು ಸಂದೇಹಪಡುತ್ತಲಿದೆ.

ರಾಜ—ದೇವಿಯೇ, ನೀನು ವಿವೇಕನ ಪತ್ನಿಯಾಗಿದ್ದರೂ ಕೂಡ ಪ್ರಮಾಣತರ್ಕದ ದಾರಿಯನ್ನರಿಯದವಳಂತೆ ಏಕೆ ಹೀಗೆ ಸಂದೇಹಪಡುವಿ ? ಅಥವಾ ಈ ಸಂದೇಹವು ನ್ಯಾಯವೇ? ಏಕೆಂದರೆ, ಋಷಿಗಳೂ ಕೂಡ ಈ ಸಂಸಾರಕ್ಕೆ ಕಾಲವೂ, ಸ್ವಭಾವವೂ, ದೈವವೂ, ಕರ್ಮವೂ, ಯದೃಚ್ಛೆಯೂ, ಈಶ್ವರನೂ ಇವರುಗಳಲ್ಲಿ ಯಾವುದು ಕಾರಣವಾಗಿರಬಹುದೆಂದು ವಿಚಾರ ಮಾಡುವರು. ಇಲ್ಲಿ ಇಷ್ಟು ತಿಳಿದುಕೊಳ್ಳಬೇಕು. ಅವಿದ್ಯೆ, ಕರ್ಮ, ವಾಸನೆ, ಪ್ರಕೃತಿ ಇವುಗಳ ಸಂಬಂಧರೂಪವಾದ ಚಕ್ರವು ಈ ಸಂಸಾರದಲ್ಲಿ ಪ್ರತಿ ಮನುಷ್ಯರಲ್ಲಿಯೂ ಅನಾದಿಯಾಗಿಯೂ, ವಿಚಿತ್ರವಾಗಿಯೂ ಪ್ರವಹಿಸುತ್ತಲಿರುವುದು. ಈ ಚಕ್ರಕ್ಕೆ ಪರಿಪಾಕದೆಸೆಯೊದಗಿದಾಗ, ಭೋಗಮೋಕ್ಷಾದಿ ರೂಪವಾದ ನಾನಾಪ್ರಕಾರವಾದ ಅವಸಾನವು ಉಂಟಾಗುವುದು. ಈ ವಿಷಯವು ಎಲ್ಲರ ಸಿದ್ಧಾಂತದಲ್ಲಿಯೂ ಸ್ಫುಟವಾಗಿರುವುದು. ಆ ಕರ್ಮಾದಿಗಳ ಅವಸಾನ ಕಾಲದಲ್ಲಿ ಈಶ್ವರನ ಕರುಣೆಯು ತನಗೆ ಅವಕಾಶವು ದೊರೆಯಿತೆಂದು ಈ ಜೀವಾತ್ಮನನ್ನು ಪರಿಗ್ರಹಿಸುವುದು. ಆ ಕರುಣೆಯಿಂದ ಪರಿಗ್ರಹಿಸಲ್ಪಟ್ಟ ಜೀವಾತ್ಮನು ಅಜ್ಞಾತಸುಕೃತ ರೂಪವಾದ ಸದಾಚಾರಸಮಾಶ್ರಯಣದಿಂದ ತತ್ವತ್ರಯ ರಹಸ್ಯ ಜ್ಞಾನವುಳ್ಳವನಾಗಿ, ಮುಕ್ತರಾದವರ ಕೈಂಕರ್ಯ ಸಾಂಮ್ರಾಜ್ಯಕ್ಕೆ ಅಕ್ಷಯಾಧಾರನಾಗಿ ಆಗುವನು. ಆತನ ಸ್ಥಿತಿಯು ಸಂಸಾರದಲ್ಲಿ ಲಂಕಾ ಪಟ್ಟಣದಲ್ಲಿ ಬದ್ಧಳಾದ ಸೀತೆಯಂತಿರುವುದು. ಈ ದೇಹವೇ ಲಂಕಾ ಪಟ್ಟಣ. ಲಂಕಾ ಪಟ್ಟಣದಲ್ಲಿ ಹತ್ತು ತಲೆ ರಾವಣನಿರುವಂತೆ ಹತ್ತು ಇಂದ್ರಿಯಗಳುಳ್ಳ ಮನಸ್ಸು ಈ ದೇಹದಲ್ಲಿರುವುದು. ಲಂಕಾ ಪಟ್ಟಣಕ್ಕೆ ಸಮುದ್ರವು ಸುತ್ತಿಕೊಂಡಿರುವಂತೆ ಈ ದೇಹಕ್ಕೆ ಸಂಸಾರ ಸಮುದ್ರವು ಸುತ್ತಿಕೊಂಡಿರುವುದು. ಆ ಲಂಕಾಪಟ್ಟಣದಲ್ಲಿ ಸೀತೆಯು ತಡೆಯಲ್ಪಟ್ಟ

ದ್ದಂತೆ ಈ ದೇಹದಲ್ಲಿ ಈ ಜೀವಾತ್ಮನು ತಡೆಯಲ್ಪಟ್ಟಿರುವನು. ಈ ಕಾಲದಲ್ಲಿ ಆ ಸೀತೆಯಂತೆಯೇ ದೀನವಾದ ಅವಸ್ಥೆಯನ್ನು ಹೊಂದಿರುವನು. ಅಲ್ಲಿ ಆಂಜನೇಯನು ಶ್ರೀರಾಮನ ಗುಣಗಳೆಲ್ಲವನ್ನೂ ಪ್ರಕಾಶಪಡಿಸಿದಂತೆ ಇಲ್ಲಿ ಆಚಾರ್ಯನು ಅರ್ಥಪಂಚಕ ಜ್ಞಾನವನ್ನು ಪ್ರಕಾಶಪಡಿಸುವನು. ಹೀಗೆ ಸೀತೆಯು ಅಲ್ಲಿ ವ್ಯಸನಪಡುತ್ತಿದ್ದಂತೆ ಇಲ್ಲಿ ಜೀವಾತ್ಮನು ಮೋಕ್ಷ ಪರ್ಯಂತರದವರೆಗೂ ವ್ಯಸನಪಡುತ್ತಿರುವನು. ಮತ್ತು ಪೂರ್ವಕೃತ ದುರಿತಗಳಿಂದ ಪ್ರಾಪ್ತವಾಗಿರುವ ಈ ದೇಹದಲ್ಲಿ ನಾನು ಸ್ವತಂತ್ರನೆಂಬ ಕಲ್ಪಿತ ಸ್ವಾತಂತ್ರ್ಯವುಳ್ಳವನಾಗಿ ಮತ್ತನಾದ ರಾಜನಂತೆ ಈ ಜೀವಾತ್ಮನು ದುಷ್ಟಮಂತ್ರಿಗಳಂತಿರುವ ಇಂದ್ರಿಯಗಳಿಂದ ತಮ್ಮ ತಮ್ಮ ಕೆಲಸಗಳಲ್ಲಿ ಬಲಾತ್ಕಾರವಾಗಿ ಎಳೆಯಲ್ಪಟ್ಟು, ಯತ್ನವಿಲ್ಲದೆ ಕೆಲಸಮಾಡುತ್ತಿರುವನು.

ಸುಮತಿ—ಆರ್ಯಪುತ್ರನೇ, ಹಾಗಾದರೆ ಬೆಂಕಿಯಿಂದ ಉರಿಯುತ್ತಿರುವ ಮನೆಯನ್ನು ಆ ಮನೆಯವನು ಬಿಡುವಂತೆ ಈ ಜೀವಾತ್ಮನು ಈ ದೇಹವನ್ನು ಬಿಟ್ಟುಬಿಡುವುದರಿಂದ ಏಕೆ ತನ್ನನ್ನು ತಾನು ಕಾಪಾಡಿಕೊಳ್ಳುವುದಿಲ್ಲ ?

ರಾಜ—ಪ್ರಿಯಳೇ, ನೀನು ಎಲ್ಲವನ್ನೂ ತಿಳಿದಿರುವಿ. ಅನಾದಿಯಾಗಿ ಬಂದ ಪ್ರೀತಿಯು ಸಮುದ್ರದಂತೆ ವಿಸ್ತಾರವಾಗಿ ದಾಟಲಸಾಧ್ಯವಲ್ಲವೇ? ನಾರಾಯಣನೆಂಬ ಶಿಲ್ಪಿಯು ಪ್ರಕೃತಿಯೆಂಬ ಚಿತ್ರದ ಕಡ್ಡಿಯಿಂದ ಸತ್ವರಜಸ್ತಮೋಗುಣಗಳೆಂಬ ಬಣ್ಣಗಳನ್ನು ಚೆನ್ನಾಗಿ ಕಾಣುವಂತೆ ಬಳದು, ಒಂದಕ್ಕೊಂದಕ್ಕೆ ಸೇರದಂತೆ ಬೇರೆ ಬೇರೆಯಾಗಿ ಆಯಾಯ ಕರ್ಮಗಳಿಗೆ ತಕ್ಕಂತೆ ವಿಭಾಗಿಸಿ ಇರಿಸಲ್ಪಟ್ಟಿರುವ ಸ್ಥಾವರಜಂಗಮಾತ್ಮಕವಾದ ಶರೀರಗಳೆಂಬ ಚಿತ್ರಗಳನ್ನು ಕಲ್ಪಿಸಿರುವನು. ರತ್ನದ ಗೋಡೆಯಂತೆ ಜ್ಞಾನಸ್ವರೂಪನಾದ ಕಾರಣ ದೇವಾದಿ ದೇಹಭೇದಗಳಿದ್ದಾಗ್ಯೂ, ತಾನು ಭಿನ್ನನಾಗದೇ ಇರುವ ಜೀವಾತ್ಮನು ಈ ದೇಹವೆಂಬ ಚಿತ್ರವನ್ನು ಧರಿಸಿಕೊಂಡಿರುವನು.

ಸುಮತಿ—(ದುಃಖದಿಂದ) ಹೀಗೆ ಉನ್ಮತ್ತಾವಸ್ಥೆಯನ್ನು ಹೊಂದಿದ ಜೀವನನ್ನು ಪತ್ನಿಯಾದ ಬುದ್ಧಿಯು ಏಕೆ ಎಚ್ಚರಿಸುವುದಿಲ್ಲ ?

ರಾಜ—ಸೂಕ್ಷ್ಮಾರ್ಥವಿಚಾರಕಳಾದ ಪ್ರಿಯಳೇ, ಆ ಬುದ್ಧಿಯೂ ಕೂಡ ಈಗ ಸ್ವಯಂ ಪ್ರಕಾಶಳಾಗಿದ್ದಾಗ್ಯೂ ತೂಕಡಿಸುತ್ತಲಿರುವಳು. ಸೂರ್ಯನು ಕಾಣದೇ ಹೋದಾಗ, ಕಮಲಿನಿಯು ಸಂಕುಚಿತವಾಗುವಂತೆ ಜನನಿಯಾದ ಬುದ್ಧಿಯು ತನ್ನ ಪತಿಯಾದ ಜೀವಾತ್ಮನು ಪ್ರಕೃತಿಸಂಬಂಧವನ್ನು ವಹಿಸಿ, ತನಗೆ ದೂರವಾಗಿ, ಸ್ಥಾವರತ್ವವನ್ನು ಹೊಂದಿದಾಗ, ಪತಿವ್ರತೆಯಂತೆ ಯಾವ ವ್ಯಾಪಾರವನ್ನೂ ಮಾಡದೆ ಸಂಕುಚಿತಳಾಗುವಳು. ಅದೇ ಜೀವಾತ್ಮನು ಜಂಗಮತ್ವವನ್ನು ವಹಿಸಿದಾಗ, ಕಳೆಗುಂದಿದವನಾಗುವ ಕಾರಣ, ಪತಿಗೆ ಸಮಾನಶೀಲಳಾದ ಬುದ್ಧಿಯೂ ಕೂಡ ಗ್ರಹಣ ಹಿಡಿದ ಚಂದ್ರನುಳ್ಳ ರಾತ್ರಿಯಂತೆ ಬಾಡಿದ ಆಕಾರವುಳ್ಳವಳಾಗುವಳು. ಆದ್ದರಿಂದ ಸರ್ವಪ್ರಕಾರದಲ್ಲಿಯೂ ಬುದ್ಧಿಯು ಪತಿಯನ್ನು ಎಚ್ಚರಿಸುವುದರಲ್ಲಿ ಅಸಮರ್ಥಳಾಗಿರುವಳು.

ಸುಮತಿ—ನಾಥನೇ, ಬುದ್ಧಿಸಹಿತನಾದ ಜೀವಾತ್ಮನ ಈ ಬದ್ಧದೆಸೆಯನ್ನು ನೋಡಿದರೆ ಬಹಳ ಪಶ್ಚಾತ್ತಾಪವಾಗುವುದು. ಹೀಗೆ ಅಗಾಧವಾದ ದುಃಖಪರಂಪರೆಗಳಿಂದ ಕ್ಲೇಶಪಡುತ್ತಿರುವ ಜೀವಾತ್ಮನಿಗೆ ಮೋಕ್ಷ ಉಂಟಾಗುವ ಕ್ರಮವನ್ನು ವಿಸ್ತಾರವಾಗಿ ತಿಳಿಸಿ, ನನ್ನ ಸಂದೇಹವನ್ನು ದೂರಮಾಡು.

ರಾಜ—ಯಾವಾಗಲೂ ಶುಭಾಶಂಸನದಲ್ಲಿಯೇ ನಿರತಳಾಗಿರುವ ದೇವಿಯೇ ಕಾರಣವನ್ನು ಚೆನ್ನಾಗಿ ತಿಳಿಸಿ, ನಿನಗೆ ತಿಳಿದಿರುವುದನ್ನೇ ಸ್ಮರಣಕ್ಕೆ ತರುವೆನು. ಈ ಜೀವಾತ್ಮನು ಅನೇಕ ಜನ್ಮಗಳಲ್ಲಿ ದುರಿತಗಳನ್ನು ಮಾಡಿರುವನು. ಆ ದುರಿತಗಳೆಲ್ಲವೂ ನಿವಾರಣೆ ಮಾಡುವುದಕ್ಕಾಗದಷ್ಟು ದೃಢವಾಗಿ, ಅವಿಚ್ಛಿನ್ನವಾಗಿ ಇವನನ್ನು ಮೋಹಗೊಳಿಸಿ, ಸಂಸಾರದಲ್ಲಿ ಸಿಲಿಕಿಸುವುದು. ಆ ಸಂಸಾರವು ಅವಿಚ್ಛಿನ್ನವಾಗಿ ಉಂಟಾಗುತ್ತಲಿದೆ. ಇದರ ನಿವಾರಣಕ್ಕೆ ನಾರಾಯಣನ ಸ್ವತಂತ್ರವಾದ ಇಚ್ಛಾಶಕ್ತಿಯೇ ಸಮರ್ಥವಾಗಿರುವುದು. ಆ ಇಚ್ಛಾಶಕ್ತಿಯು ಸ್ವಭಾವವಾಗಿಯೇ ಕರುಣೆಯಿಂದ ಕೂಡಿರುವ ಕಾರಣ, ಯಾವುದಾದರೂ ಒಂದು ನೆಪವನ್ನು ಸಂಪಾದಿಸಿಕೊಂಡು, ಜೀವಾತ್ಮನಿಗೆ ಸಂಸಾರ ನಿವಾರಣವನ್ನು ಉಂಟುಮಾಡಿ ಸಂತೋಷಿಸುವುದು.

ಸುಮತಿ—ನಾನು ಆ ನಿಜವನ್ನು ಕೇಳಬಯಸುವಾದರೆ, ಆರ್ಯಪುತ್ರನೇ ಅಪ್ಪಣೆ ಕೊಡಿಸು.

ರಾಜ—ಪ್ರಿಯಳೇ, ಸೂಕ್ಷ್ಮಾರ್ಥ ಸಂಗ್ರಹವನ್ನು ಹೇಳುತ್ತೇನೆ, ಕೇಳು. ಬಾಲಕನಿಗೆ ಅನೇಕ ಪಿಶಾಚಗಳು ಹಿಡಿದುಕೊಂಡಂತೆ ಕಾಮ, ದ್ವೇಷ, ಅಹಂಕಾರ. ಇವುಗಳು ಜೀವಾತ್ಮನನ್ನು ಹಿಡಿದುಕೊಂಡಿರುವುವು. ಆ ಪಿಶಾಚಗಳಿಂದ ಹಿಡಿಯಲ್ಪಟ್ಟ ಬಾಲಕನಿಗೆ ಮಹಾಮಾಂತ್ರಿಕನ ಕಟಾಕ್ಷದಿಂದ ಪಿಶಾಚಗಳು ತೊಲಗಿ ಹೋಗಿ ಪೂರ್ವಸ್ಥಿತಿಯು ಬರುವಂತೆ ಜೀವಾತ್ಮನಿಗೆ ಆಚಾರ್ಯ ಕಟಾಕ್ಷದಿಂದ ಕಾಮದ್ವೇಷಾದಿಗಳೆಲ್ಲವೂ ನಾಶವಾಗಿ, ಮುಮುಕ್ಷುಗಳ ಮಾರ್ಗದಲ್ಲಿ ಪ್ರವೇಶವು ಉಂಟಾಗುವುದು. ಈ ಆಚಾರ್ಯ ಕಟಾಕ್ಷವು ಜಾಯಮಾನನಾಗುವಾಗಲೇ ಭಗವತ್ಕಟಾಕ್ಷಕ್ಕೆ ಪಾತ್ರನಾದ ಜೀವನಿಗೆ ದೊರಕುವುದು. ಹೀಗೆ ಭಾಗ್ಯವಶದಿಂದ ಸದಾಚಾರ್ಯನ ಕಟಾಕ್ಷಕ್ಕೆ ಜೀವನು ಪಾತ್ರನಾದರೆ, ತತ್ವಜ್ಞಾನವೂ, ಶಮದಮಾದಿ ನಾನಾವಿಧವಾದ ಗುಣಗಳೂ ಮೋಕ್ಷಸುಖಕ್ಕೆ ಮೊಳಕೆಗಳಾಗಿ ಉಂಟಾಗುವುವು. ಅನಂತರದಲ್ಲಿ ಪುಣ್ಯಕ್ಷಯವಾದಾಗ, ಸ್ವರ್ಗದಿಂದಲೂ, ತನಗೆ ಪತನವಾಗುವುದೆಂದು ಹೆದರಿ, ಹಾಗೆಯೇ ಪಾಪಕರ್ಮಗಳಿಂದ ನರಕಭೋಗವು ಉಂಟಾಗುವುದೆಂದು ಹೆದರಿ, ಪುಣ್ಯಪಾಪಕರ್ಮಗಳಲ್ಲಿ ಆಶೆಯನ್ನು ಬಿಡುವುದಕ್ಕೆ ಇಷ್ಟವುಳ್ಳವನಾದಾಗ್ಯೂ, ದುರ್ವಾಸನೆಯೆಂಬ ಪಾಶದಿಂದ ಎಳೆಯಲ್ಪಟ್ಟು, ವ್ಯಾಕುಲವಾದ ಮನಸ್ಸುಳ್ಳ ಜೀವಾತ್ಮನಿಗೆ ಪ್ರಾಪ್ಯನಾದ ಪರಮಕಾರುಣಿಕನಾದ ಶ್ರೀನಿವಾಸನಲ್ಲಿ ದೃಢವಾದ ಭಕ್ತಿಯು ಭಾಗ್ಯವಿಶೇಷದಿಂದ ಸಿದ್ಧಿಸುವುದು. ಈ ಮಧ್ಯದಲ್ಲಿ ಸರ್ವಸ್ವತ್ತನ್ನೂ ದಕ್ಷಿಣೆಯಾಗುಳ್ಳ ಯಜ್ಞವು ಪ್ರಾರಂಭವಾಗುವುದು. ಈ ಯಜ್ಞದಲ್ಲಿ ಪತ್ನಿಯಾದ ನಿನ್ನೊಡನೆ ನಾನು ಯಜಮಾನನಾಗುತ್ತೇನೆ. ಶಮದಮಾದಿ ಗುಣಗಳು ಆರ್ತ್ವಿಜ್ಯವನ್ನು ವಹಿಸುವರು. ಜೀವಾತ್ಮನೇ ಹವಿಸ್ಸಾಗುವನು. ಶ್ರೀಯಃಪತಿಯಾದ ನಾರಾಯಣನು ಫಲಾಭಿಸಂಧಿಯಿಲ್ಲದೆ ಉದ್ದೇಶ ದೇವತೆಯಾಗುವನು. ಪರಮಸ್ಥಾನದಲ್ಲಿರುವ ಈ ಬದ್ಧಾತ್ಮನು ಕರ್ಮಬಂಧವನ್ನು ಕಳೆದುಕೊಂಡವನಾಗಿ ಮುಕ್ತಿಯನ್ನು ಹೊಂದುವನು. ಇಲ್ಲಿ ಒಂದು ವಿಷ

ಯವನ್ನು ನೀನು ತಿಳಿದುಕೊಳ್ಳಬೇಕು. ಹೀಗೆ ತನ್ನ ರಕ್ಷಣಭಾರವನ್ನೆಲ್ಲವನ್ನೂ ಭಗವಂತನಲ್ಲಿ ಸಮರ್ಪಿಸಿದ ಈ ಜೀವನ ಸಮಸ್ತ ದುರಿತಗಳನ್ನೂ ಸರ್ವಸ್ವತಂತ್ರನಾದ ಲಕ್ಷ್ಮೀಪತಿಯು ಕೃಪೆಯಿಂದ ಪುನಃ ಹುಟ್ಟದಂತೆ ತಾನೇ ನಾಶಮಾಡುವನು.

ಸುಮತಿ—ಆರ್ಯಪುತ್ರನೇ. ಹೀಗೆ ನೀನು ವರ್ಣಿಸುವ ಮೋಕ್ಷದೆಸೆಯು ಪುರುಷನಿಗೆ ಯಾವಾಗ ಉಂಟಾಗುವುದು ?

ರಾಜ—ಸಕಲವನ್ನೂ ತಿಳಿದಿರುವ ದೇವಿಯೇ, ದುಸ್ಸಹವಾಗಿಯೂ, ಅನಾದಿಯಾಗಿಯೂ ಇರುವ ದುಃಖಸಮುದ್ರದಲ್ಲಿ ಮುಳುಗಿರುವ ಜೀವನಿಗೆ ಶಾಸ್ತ್ರಾನುಗುಣವಾಗಿಯೂ, ನ್ಯಾಯಾನುಗುಣವಾಗಿಯೂ ಆಯಾಯ ದೇವಮನುಷ್ಯಾದಿಗಳ ಆಯುಃಪರಿಣಾಮವನ್ನನುಸರಿಸಿ, ಯಾವುದೋ ಒಂದು ಕಾರಣದಿಂದ ಸಂಸಾರ ನಿವೃತ್ತಿಯಾಗುವುದೆಂದು ಸಂತೋಷಪಡಬೇಕು. ಈ ಲೋಕದಲ್ಲಿ ಸದಾಚಾರ್ಯನಿಂದ ಉಪದೇಶಿಸಲ್ಪಟ್ಟ ಲಕ್ಷ್ಮೀಪತಿಯು ಕರುಣೆಯೆಂಬ ಅಪಾಯವಿಲ್ಲದ ಏಣಿಯನ್ನು ಕ್ರಮವಾಗಿ ಹತ್ತಿ, ಅಂದರೆ, ಸತ್ವಾದಿ ಗುಣಗಳ ವೈಷಮ್ಯದಿಂದ ಬುದ್ಧಿಯು ಪರಿಪಕ್ವವಾಗುವುದು, ಅದರಿಂದ ಅಕಸ್ಮಾತ್ ಸುಕೃತವು ಉಂಟಾಗುವುದು, ಆ ಸುಕೃತವನ್ನೇ ನೆಪವಾಗಿಟ್ಟುಕೊಂಡು, ಭಗವಂತನ ಕೃಪೆಯುಂಟಾಗುವುದು. ಆ ಕೃಪೆಯಿಂದ ಸದಾಚಾರ್ಯನನ್ನಾಶ್ರಯಿಸುವುದು, ಅದರಿಂದ ಜ್ಞಾನಾನುಷ್ಠಾನಾದಿಗಳು ಉಂಟಾಗುವುದು, ಅದರಿಂದ ಭಕ್ತಿಯನ್ನಾಗಲೀ, ಪ್ರಪತ್ತಿಯನ್ನಾಗಲೀ ಸ್ವೀಕರಿಸುವುದು ಹೀಗೆ ಕ್ರಮವಾಗಿ ಹತ್ತಿ, ಕೃತಕೃತ್ಯನಾಗಿ ಶುದ್ಧಸತ್ವಮಯವಾದ ಪರಮಪದದಲ್ಲಿ ಪ್ರಕಾಶಿಸುವನು. ಮತ್ತು ಸರ್ವೇಶ್ವರನ ಸ್ವೈರವಿಲಾಸವನ್ನು ಅವನ ಕರುಣೆಯು ಶಮನ ಮಾಡುತ್ತಾ, ಆಶ್ರಿತರುಗಳಿಗೆ ರುಚಿಯಾಗಿಯೂ, ಹಿತವಾಗಿಯೂ ಇರುವ ಸಂಸಾರ ವಿಮೋಚನ ರೂಪವಾದ ತನ್ನ ಮತವನ್ನು ತಾನೇ ಕೊಡುತ್ತಾ, ನಿಯಮಪೂರ್ವಕವಾಗಿ ಪ್ರಪನ್ನನಿಗೆ ಶರೀರಾವಸಾನದಲ್ಲಿಯೂ, ಭಕ್ತಿನಿಷ್ಠನಿಗೆ ಪ್ರಾರಬ್ಧಕರ್ಮಾವಸಾನದಲ್ಲಿಯೂ ಮೋಕ್ಷಸಿದ್ಧಿಗೆ ಕಾರಣವಾಗಿರುವುದು.

ಈ ಕರುಣೆಯು ಸೌಂದ್ರವಾದ, ನೆರಳಿನಂತೆ, ಸುಖದಾಯಕವಾದ ಸೌಶೀಲ್ಯಾದಿ ಗುಣಗಳಿಂದ ಕೂಡಿ, ಬಿಸಿಲಿನಂತೆ ಕ್ಲೇಶಕರವಾದ ಪ್ರಕೃತಿಯನ್ನು ದೂರವಮಾಡಿ, ರಜೋಗುಣವೆಂಬ ಕೆಸರನ್ನು ಬಿಡಿಸಿ, ತಾಪತ್ರಯಗಳನ್ನು ಹೋಗಲಾಡಿಸಿ, ಜೀವಾತ್ಮನನ್ನು ವೈಕುಂಠಕ್ಕೆ ಒಯ್ಯುವುದು.

ಸುಮತಿ—ಆರ್ಯಪುತ್ರನೇ, ಅಳತೆಯಿಲ್ಲದ ಪಾಪಗಳಿಂದ ತುಂಬಿರುವ ಜೀವನಿಗೆ ದುಃಖಸಾಗರದಿಂದ ಬಿಡುಗಡೆಯಾಗುವುದೆಂಬ ಮಾತು ಬಾಲಕರನ್ನು ಸಂತೋಷಪಡಿಸುವುದಕ್ಕೆ ಹೇಳುವ ಪ್ರಲೋಭ ವಚನಗಳಂತೆ ಕಾಣುತ್ತದೆ.

ರಾಜ—ಪ್ರಿಯಳೇ, ಮಿಥ್ಯಾದೃಷ್ಟಿಯಾಗಬೇಡ. ನೀನು ಸುಮತಿಯಲ್ಲವೇ? ಎಲ್ಲಿಯಾದರೂ ಆಪ್ತವಾದ ವೇದಕ್ಕೆ ಬಾಧೆಯು ಕಾಣಲ್ಪಟ್ಟಿರುವುದೇ? ಈಶ್ವರನ ಭಕ್ತಜನ ಸಂರಕ್ಷಣ ಪ್ರತಿಜ್ಞೆಗಾಗಲಿ ಬಾಧೆಯು ಕಾಣಲ್ಪಟ್ಟಿರುವುದೇ? ಭಗವಂತನ ಕೃಪೆಯ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಮತ್ತು ನಿನ್ನ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಮುರವೈರಿಯ ಸಂಕಲ್ಪದ ಮಹಿಮೆಯು ಅಹಂಕಾರವೆಂಬ ಮೊಸಳೆಯಿಂದ ಹಿಡಿಯಲ್ಪಟ್ಟು, ಆ ತೊಂದರೆಯಿಂದ ಕೂಗುತ್ತಲಿರುವ ಪ್ರಾಣಿಗಳನ್ನು ಬಿಡಿಸುವುದರಲ್ಲಿ ಉದ್ಯುಕ್ತವಾಗಿರುವುದು. ಅದನ್ನು ಸ್ವಪ್ನವು ಕಳೆದ ಮೇಲೆ ಕಣ್ಣುಬಿಟ್ಟಂತೆ ಸರಿಯಾದ ಬುದ್ಧಿಯುಳ್ಳ ನೀನೇ ನೋಡುವಿ. ಆಶ್ರಿತರನ್ನು ಸಂರಕ್ಷಿಸುವುದು ಸರ್ವಸಾಧಾರಣವಾಗಿರುವುದು. ದೀನನಾಗಲೀ, ಉದ್ಧತನಾಗಲೀ, ವಿರೋಧಿಯಾಗಲೀ, ಉದಾಸೀನನಾಗಲೀ ಶರಣಾಗತನಾದ ಪಕ್ಷದಲ್ಲಿ, ಅವರುಗಳನ್ನು ತಮ್ಮ ಶಕ್ತಿಗೆ ತಕ್ಕಂತೆ ಕಾಪಾಡುವುದು ಸತ್ಪುರುಷರ ಧರ್ಮವು. ಅದರಂತೆ ವಿಶ್ವಾಮಿತ್ರನು ಶುನಶ್ಯೇಫನನ್ನೂ, ಕಪೋತ ಪಕ್ಷಿಯು ತನಗೆ ವೈರಿಯಾದ ನಿಷಾದನನ್ನೂ, ಶ್ರೀರಾಮನು ತನಗೆ ದ್ರೋಹಮಾಡಿದ ಕಾಕಾಸುರನನ್ನೂ, ರಘುಮಹಾರಾಜನು ಅಶ್ವಮೇಧದ ಕುದುರೆಯನ್ನು ಕಾಪಾಡುವುದರಲ್ಲಿ ಬ್ರಾಹ್ಮಣನನ್ನೂ, ದೇವಸ್ತ್ರೀಯರುಗಳು ತ್ವಷ್ಟನನ್ನೂ, ನಾಳೀಜಂಘನೆಂಬ ಬಕವು ಇಂದ್ರದ್ಯುಮ್ನನನ್ನೂ, ಬೃಹಸ್ಪತಿ

ಯು ಇಂದ್ರನನ್ನೂ ಸಹ ಕಾಪಾಡಿರುವುದು ವಿಸ್ತಾರವಾಗಿರುವುದು. ಹಾಗೆಯೇ ವಿಭೀಷಣನನ್ನೂ, ಪರಶುರಾಮನನ್ನೂ, ಕಾಕಾಸುರನನ್ನೂ, ಸುಗ್ರೀವನನ್ನೂ ಶರಣಾಗತರೆಂದು ಕಾಪಾಡಿರುವನು.

ಸುಮತಿ—ಆರ್ಯಪುತ್ರನೇ, ಮೋಕ್ಷಾಕಾಂಕ್ಷಿಗಳು ಬ್ರಹ್ಮನೇ ಮೊದಲಾದ ದೇವತೆಗಳನ್ನು ಉಪಾಸನೆ ಮಾಡುತ್ತಿರುವಾಗ, ಶ್ರೀಯಃಪತಿಯಾದ ನಾರಾಯಣನೇ ಮೋಕ್ಷಕ್ಕೆ ಕಾರಣನೆಂದು ಹೇಗೆ ನೀನು ಹೇಳುವಿ?

ರಾಜ—ಸೂಕ್ಷ್ಮದೃಷ್ಟಿಯುಳ್ಳ ಪ್ರಿಯಳೇ, ನಾರಾಯಣನ ಮಹಿಮೆಯು ಅಸಾಧಾರಣವಾದದ್ದು. ಆಬ್ರಹ್ಮಸ್ತಂಬ ಪರ್ಯಂತವಾಗಿ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಭೂತನಾದ ನಾರಾಯಣನಲ್ಲಿ ನೆಲೆಗೊಳಿಸಿದ ಭಕ್ತಿಯು ಸಂಸಾರ ನಿವೃತ್ತಿಯನ್ನು ಉಂಟುಮಾಡುವುದೇ ಹೊರತು, ಬ್ರಹ್ಮಾದಿಗಳಲ್ಲಿ ಮಾಡಿದ ಭಕ್ತಿಯು ಸಂಸಾರ ನಿವೃತ್ತಿಯನ್ನು ಮಾಡಲಾರದು. ಮೋಕ್ಷವನ್ನು ಅಪೇಕ್ಷಿಸಿ, ಇತರ ದೇವತೆಗಳನ್ನು ಪೂಜಿಸತಕ್ಕವನಿಗೂ, ಬಾಯಾರಿಕೆಯಿಂದ ಬಳಲಿ, ಹಿಮದ ಹನಿಗಳನ್ನು ಕುಡಿಯಲಪೇಕ್ಷಿಸುವವನಿಗೂ ಭೇದವಿಲ್ಲ. ಚಿತ್ರದಲ್ಲಿ ಬರೆದಿರುವ ಸಾವಿರ ಸೂರ್ಯರುಗಳು ಕತ್ತಲೆಯನ್ನು ಹೋಗಲಾಡಿಸಲಾರರು. ಜೀವಾತ್ಮನಿಗೆ ಶಾಂತಿಯೇ ಇಲ್ಲದ ಹಾಗೆ ಅನಾದ್ಯಜ್ಞಾನರೂಪವಾದ ನಿದ್ರೆಯನ್ನುಂಟುಮಾಡುವ ತ್ರಿಗುಣ ಶಕ್ತಿಯುಳ್ಳ ಪ್ರಕೃತಿಯೆಂಬ ರಾತ್ರಿಯು ನರಕಾಂತಕನಾದ ನಾರಾಯಣನ ಸಂಕಲ್ಪವೆಂಬ ಸೂರ್ಯನ ಮಹಿಮೆಯಿಂದಲೇ ಮುಗಿಯಬೇಕು.

ಸುಮತಿ—ನಾಥನೇ? ದೇವತೆಗಳೂ, ಋಷಿಗಳೂ ಕೂಡ ಪರಾವರ ಪುರುಷರುಗಳ ವಿವೇಚನೆಗಳಲ್ಲಿ ಸಂಶಯಪಡುತ್ತಲಿದ್ದಾರೆ. ಹೀಗಿರುವಾಗ ಪುರುಷೋತ್ತಮನೊಬ್ಬನಲ್ಲಿಯೇ ನಿಶ್ಚಯಿಸಿ ಹೇಳಿದೆಯಲ್ಲಾ, ಅದು ಹೇಗೆ?

ರಾಜ—ದೇವಿಯೇ, ಇತಿಹಾಸಗಳಿಂದಲೂ, ಪುರಾಣಗಳಿಂದಲೂ, ಉಪನಿಷತ್ತುಗಳಿಂದಲೂ ಇದು ಸಿದ್ಧವಾಗಿಯೇ ಇರುವುದು. ವೇದವ್ಯಾಸ, ವಿಪ್ರರೂ, ಕೇಶವನೂ ಒಂದು ರಾಶಿ. ವೇದಗಳೇ ಪ್ರಮಾಣಗಳು. ಆ ಪ್ರಮಾಣಗಳಿಂದ ನಿಶ್ಚಯಿಸತಕ್ಕವರು ಸಾತ್ವಿಕರಾದ ಬ್ರಾಹ್ಮಣರುಗ

ಳು. ಹಾಗೆ ನಿಶ್ಚಯಿಸಬೇಕಾದವನೇ ವಿಷ್ಣುವು. ಹೀಗೆ ಇವುಗಳಿಗೆ ಐಕವಾಕ್ಯವನ್ನು ನಿಶ್ಚಯಿಸುತ್ತೇವೆ. ಕೀಟಪ್ರಾಯರಾದ, ಪಂಡಿತಂಮನ್ಯರಾದ ಇತರರಿಂದೇನು ಪ್ರಯೋಜನ ? ಮತ್ತು ಸಮಸ್ತ ಶಾಸ್ತ್ರಗಳನ್ನು ಚೆನ್ನಾಗಿ ಪರ್ಯಾಲೋಚಿಸಿ, ಸರಿಯಾದ ಉಪಪತ್ತಿಗಳಿಂದ ವಿಚಾರಮಾಡಿ, ಹೀಗೆಯೇ ಸರಿಯೆಂದು ತತ್ವವನ್ನು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ, ಮಹಾಋಷಿಗಳ ಸನ್ನಿಧಿಯಲ್ಲಿ ತನ್ನ ಭುಜವನ್ನು ಮೇಲಕ್ಕೆತ್ತಿ, ಸತ್ಯಂ, ಸತ್ಯಂ, ಸತ್ಯಂ ಎಂದು ಹೇಳಿದ ವೇದದ ಪರಮಾರ್ಥವನ್ನು ತಿಳಿದಿರುವ ವ್ಯಾಸರು ಪ್ರಮಾಣಭೂತರಾದ ಪಕ್ಷದಲ್ಲಿ, ಕೇಶವನಿಗಿಂತಲೂ ಪರಮಪುರುಷನ್ಯಾರು ?

" ಮಹಾಜನೋಯೇನ ಗತಸ್ಸಪಂಥಾಃ " ಎಂದು ಮಹರ್ಷಿಗಳು ಹೇಳಿರುವರು. ಅದು ಹಾಗೆಯೇ ಕಾಣುವುದು. ಏಕೆಂದರೆ, ತರ್ಕವು ಒಂದು ಸ್ಥಿತಿಯನ್ನು ಹೊಂದತಕ್ಕದ್ದಾಗಿಲ್ಲ. ಒಬ್ಬನು ನಿಶ್ಚಯಿಸಿದ್ದನ್ನು ಇನ್ನೊಬ್ಬನು ದೂಷಿಸುವನು. ಆದಕಾರಣ ಅದಕ್ಕೆ ಎಲ್ಲಿಯೂ ಪರ್ಯವಸಾನವಿಲ್ಲವು. ವೇದದಿಂದ ಅರ್ಥನಿಶ್ಚಯವನ್ನು ಮಾಡಿಕೊಳ್ಳೋಣವೆಂದರೆ ವಿಪ್ರಕೀರ್ಣವಾಗಿರುವುದು. ಋಷಿವಚನಗಳಿಂದ ನಿರ್ಣಯಿಸೋಣವೆಂದರೆ, ಕಪಿಲ, ಕಣಾದ, ಅಕ್ಷಪಾದ, ಇವರುಗಳ ವಚನಗಳು ಪರಸ್ಪರ ವಿರುದ್ಧಗಳಾಗಿವೆ. ಇವುಗಳೇ ಹೀಗಿರುವಾಗ, ಚಾರ್ವಾಕ, ಬೌದ್ಧಾದಿಗಳ ಕ್ಷುದ್ರವಚನಗಳಿಂದ ಹೇಗೆ ತಾನೆ ನಿರ್ಣಯಿಸುವುದಕ್ಕಾಗುವುದು ? ಈ ರೀತಿಯಲ್ಲಿ ತತ್ವಾರ್ಥ ನಿಶ್ಚಯವು ಗುಹೆಯೊಳಗೆ ನಿಧಿಯಂತೆ ಅಡಗಿಹೋಗಿದೆ. ಆದುದರಿಂದ ಚತುರನಾದ ಮನುಷ್ಯನು ಮಹಾಜನರ ದಾರಿಯನ್ನು ತತ್ವನಿಶ್ಚಯಕ್ಕಾಗಿ ಪರಿಗ್ರಹಿಸಬೇಕು. ವ್ಯಾಸ, ವಾಲ್ಮೀಕಿ, ಮನು, ಬೃಹಸ್ಪತಿ, ಶುಕ, ಶೌನಕ ಮೊದಲಾದ ಮಹಾತ್ಮರುಗಳು ನಾವು ಹಿಡಿದಿರುವ ದಾರಿಯನ್ನೇ ಹೇಳುತ್ತಿರುವರು. ಜನ್ಮ, ಜರಾ, ಮರಣವರ್ಜಿತವಾದ ಮೋಕ್ಷಸಂಪತ್ತನ್ನು ಸಮಸ್ತರಿಗೂ ಭಗವಂತನಲ್ಲಿ ಪ್ರಾರ್ಥಿಸಿದ ಪರಾಶರರು ವಿಷ್ಣುವಿಗೆ ಜಗತ್ಕಾರಣತ್ವವನ್ನೂ ಮುಮುಕ್ಷೂಪಾಸ್ಯತ್ವವನ್ನೂ, ಮೋಕ್ಷಪ್ರದತ್ವವನ್ನೂ ತಿಳಿಯುವುದರಲ್ಲಿ ಪೌಲಸ್ತ್ಯ, ವಸಿಷ್ಠ, ವರಪ್ರದಾನದಿಂದ ಲಬ್ಧಪಾರಮಾರ್ಥಜ್ಞಾನವುಳ್ಳವರಾದಕಾರಣ ಅವರೊಬ್ಬರೇ ಸಾಕಾಗಿದೆ.

ಏಕೆಂದರೆ, "ಪರಾನ್ ಅಂದರೆ, ಬಾಹ್ಯಕುದೃಷ್ಟಿಗಳನ್ನು 'ಅಸ್ಯ ಣಾತಿ' ಅನೇಕ ಪ್ರಮಾಣಗಳಿಂದ ಬಾಧಿಸುವನು. (ಇತಿ ಪರಾಶರಃ)" ಎಂಬ ನಿರ್ವಚನದಿಂದ ಆ ಪರಾಶರರು ಸ್ವೀಕರಿಸಿರುವ ಮತವೇ ಪ್ರಾಮಾಣಿಕವಾದದ್ದು.

ಸುಮತಿ—ಆರ್ಯಪುತ್ರನೇ, ಈ ಸಮಾಧಾನವು ನಿರುತ್ತರವಾದದ್ದು. ಈಗ ಅನಂತವಾದ ಶಾಸ್ತ್ರಗಳ ವಿಚಾರವನ್ನು ಸಹಿಸಲಾರದೆ ಆತುರಪಡುವ ಮನಸ್ಸುಳ್ಳ ಚೇತನನಿಗೆ ಸರ್ವ ವೇದಾರ್ಥಸಾರವನ್ನೂ ಒಟ್ಟುಗೂಡಿಸಿ ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ.

ರಾಜ—ಚೆನ್ನಾಗಿ ಯೋಚನೆ ಮಾಡಿದೆ. ತೋರಿಸುವೆನು. ಜೀವರುಗಳು ಬದ್ಧ, ಮುಕ್ತ, ನಿತ್ಯ ಎಂದು ಮೂರು ಪ್ರಕಾರವಾಗಿರುವರು. ಈ ತ್ರಿವಿಧ ಚೇತನರಿಗೂ, ಅಚೇತನ ಪದಾರ್ಥಗಳಿಗೂ ಆ ನಾರಾಯಣನ ಸಂಕಲ್ಪವೇ ಆಧಾರವಾಗಿರುವುದು. ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಆ ನಾರಾಯಣನೇ ಕೊಡತಕ್ಕವನು ಸಮಸ್ತ ನದಿಗಳೂ ಸಮುದ್ರವನ್ನೇ ಸೇರುವಂತೆ ಬ್ರಹ್ಮೋಪಾಸನ ಪ್ರತಿಪಾದಕಗಳಾದ ಉಪನಿಷತ್ತುಗಳೆಲ್ಲವೂ ಆ ನಾರಾಯಣನನ್ನೇ ಸೇರಿರುವುವು. ಆ ಉಪನಿಷತ್ತುಗಳಲ್ಲಿ ಹೇಳುವ ಹಿರಣ್ಯಗರ್ಭಶಿವ ಇಂದ್ರಾದಿ ಶಬ್ದಗಳು ತದಂತರ್ಯಾಮಿಯಾಗಿರುವ ನಾರಾಯಣನನ್ನೇ ಹೇಳುವುವು. ಆದಕಾರಣ ಲಕ್ಷ್ಮೀಪತಿಯಾದ ನಾರಾಯಣನೇ ಪರತತ್ವವು. ಆ ನಾರಾಯಣನಲ್ಲಿ ಮಾಡುವ ಭಕ್ತಿಯು ಮೋಕ್ಷೋಪಾಯಭೂತವಾದ ಭಗವಂತನ ಅನುಗ್ರಹಕ್ಕೆ ಕಾರಣವು. ಪ್ರಪತ್ತಿಯೂ ಸಹ ಅದೇ ರೀತಿಯಲ್ಲಿ ಕಾರಣವು. ಮಂಗಳಕರವಾದ ಅವನ ಸಂಕಲ್ಪವು ಸಂಸಾರವನ್ನು ಬಿಡಿಸಿ ಕಾಪಾಡುವುದು. ಹೀಗೆ ಮುಮುಕ್ಷುವಾದ ಮನುಷ್ಯನು ಬಹು ಜಾಗ್ರತೆಯಲ್ಲಿಯೇ ಮೋಕ್ಷೋಪಯುಕ್ತವಾದ ಜ್ಞಾನವನ್ನು ಉಂಟುಮಾಡುವ ಆಚಾರ್ಯರಿಂದ ಉಪದೇಶಿಸಲ್ಪಟ್ಟ ಮೂಲಮಂತ್ರಾದಿಗಳಿಂದ ದೇಹಾತ್ಮಾಭಿಮಾನರೂಪವಾದ ಪಿಶಾಚಿಯನ್ನು ಪರಿಹರಿಸಿಕೊಳ್ಳುವನು. ಪ್ರಿಯಳೇ, ಬಹುಶ್ರುತರುಗಳಿಗೂ ಕೂಡ ಚಿತ್ತಕ್ಕೆ ಸಮಾಧಾನವನ್ನುಂಟುಮಾಡುವ ಸಂಗ್ರಹವ

ನ್ನು ತಿಳಿಸಿರುತ್ತದೆ. ಆದರೆ ಈ ಕಲಿಯುಗದಲ್ಲಿ ಕೆಲ ದುರ್ಜ್ಞಾನವು
ಳ್ಳವರು ಮೇಲೆ ಮಾತ್ರವೇ ವೇದವನ್ನು ಸ್ವೀಕರಿಸಿರುವಂತೆ ನಟಿಸು
ತ್ತಾ, ದತ್ತ್ವೀಸಹೋದರರನ್ನು ಆಕ್ಷೇಪಿಸುವಂತೆ ನಾಸ್ತಿಕರನ್ನು ಆಕ್ಷೇ
ಪಿಸುವರಲ್ಲದೆ, ಅಂತರಂಗದಲ್ಲಿ ನಾಸ್ತಿಕರನ್ನೇ ಛಂತಃ ಅನುಸರಿಸುತ್ತಿ
ರುವರು. ಇದಕ್ಕೆ ಪ್ರತಿಕ್ರಿಯೆಯನ್ನು ವಿಶಾಲಬುದ್ಧಿಯುಳ್ಳವರು ವೇ
ದಾಂತಗಳಲ್ಲಿ ಅನುಸಂಧಾನ ಮಾಡುತ್ತಿರುವರು.

ಸುಮತಿ—ಆರ್ಯಪುತ್ರನೇ, ನಿನ್ನ ವಚನವು ಬಹು ಶ್ಲಾಘ್ಯವಾಗಿರುವುದು.
ಆದರೂ ಆಯಾಯ ಮಹರ್ಷಿ ಭಾಷ್ಯಗಳಿಂದಲೂ, ಅದಕ್ಕನುಗುಣ
ವಾದ ತರ್ಕಗಳಿಂದಲೂ ವೇದಾಂತಗಳು ರಂಜಿಸಲ್ಪಟ್ಟವುಗಳಾಗಿ
ಚೋರರುಗಳಿಂದ ಕದ್ದೊಯ್ದ ದನಗಳೋಪಾದಿಯಲ್ಲಿ ಪ್ರಭು
ವನ್ನು ಸೇರುವುದಿಲ್ಲವೆಂದು ನನಗೆ ಅತ್ಯಂತ ಭಯವಾಗುವುದು.

ರಾಜ—ಭಯಪಡಬೇಕಾಗಿಲ್ಲ. ಮನ್ವಾದಿ ಸ್ಮೃತಿಗಳಿಂದ ಐಕಕಂಠ್ಯವ
ನ್ನು ಹೊಂದಿದ ಶ್ರುತಿಗಳು ತನಗೆ ವಿರುದ್ಧವಾದ ಅರ್ಥಗಳನ್ನು ಪ್ರತಿ
ಪಾದಿಸುವ ಕಪಿಲಾದಿ ಸ್ಮೃತಿಗಳನ್ನು ಸ್ವಪ್ನದಲ್ಲಿಯೂ ನೋಡುವುದಿಲ್ಲ.
ಶ್ರುತಿಗಳು ಸ್ವತಃ ಪ್ರಮಾಣವಾದ್ದರಿಂದ ಸುದೃಢವಾದ ಮೀಮಾಂಸೆ
ಯಿಂದ ಸಂರಕ್ಷಿಸಲ್ಪಟ್ಟು, ಅನವಸ್ಥಿತವಾದ ದುಸ್ತರ್ಕಾಡಂಬರಗಳ
ನ್ನು ಓಡಿಸಿಬಿಡುವುವು.

(ತೆರೆಯಲ್ಲಿ) ದುರ್ಬುದ್ಧಿಯಾದ ಕಂಸನು ಉಗ್ರಸೇನನನ್ನು ಕಾರಾ
ಗೃಹದಲ್ಲಿ ಬಂಧಿಸಿದಂತೆ ತನ್ನ ನಾಶವನ್ನು ತಾನು ಲಕ್ಷಿಸದೆ, ದುಷ್ಟನಾದ
ಮಹಾಮೋಹನು ಜೀವಾತ್ಮನನ್ನು ಸಂಸಾರದಲ್ಲಿ ಬಂಧಿಸಿರುವನು. ಬ
ಲೋತ್ತರನಾದ ಕೃಷ್ಣನು ಕರುಣೆಯಿಂದ ಆ ಉಗ್ರಸೇನನನ್ನು ಬಿಡಿಸಿ
ದಂತೆ ವಿಶ್ವೋಪಕಾರಪರಾಯಣನಾದ ವಿವೇಕನು ಬಲೋತ್ತರನಾಗಿ ಜೀ
ವಾತ್ಮನನ್ನು ಈ ಬಂಧನದಿಂದ ಬಿಡಿಸುವನು. ಹಾಗೆ ಬಿಡಿಸಲ್ಪಟ್ಟ ಜೀವ
ನು ಮೋಕ್ಷಸಂಪತ್ತನ್ನು ಪಡೆಯುವನು.

ರಾಜ—(ಕೇಳಿ ಸಂತೋಷದಿಂದ) ಪ್ರಿಯಳೇ, ಅಶರೀರ ವಾಕ್ಕು ಕೇಳಬ
ರುವುದು. ಅಶರೀರವಾಕ್ಕೆಂದಿಗೂ ಸುಳ್ಳಾಗುವುದಿಲ್ಲ.

ಸುಮತಿ—ಆರ್ಯಪುತ್ರನೇ, ಇದು ದೇವವಾಣಿಯಲ್ಲವೇ? ಎಂದಿಗೂ ಸುಳ್ಳಾಗುವುದಿಲ್ಲ.

ರಾಜ—ಪ್ರಿಯಳೇ, ಸರ್ವ ಪ್ರಕಾರದಿಂದಲೂ ನಿನ್ನ ಸಹಾಯವನ್ನು ಪಡೆದಿರುವ ನನಗೆ ಜಯಸಿದ್ಧಿಯು ನನ್ನ ಕೈಯಲ್ಲಿಯೇ ಇರುವುದು. ಈ ಬಾಹ್ಯ ಶತ್ರುಗಳ ಜಯಾಪೇಕ್ಷೆಯು ಅತ್ಯಲ್ಪವಾಗಿದ್ದಾಗ್ಯೂ, ಸ್ವಲ್ಪವಾದ ನೀರನ್ನು ನದೀಪ್ರವಾಹವು ಹೆಚ್ಚಿಸುವಂತೆ ಭಗವಂತನ ಅನುಗ್ರಹವು ಇದನ್ನು ಹೆಚ್ಚಿಸುವುದು. ಈ ನಮ್ಮ ಪ್ರಯತ್ನವೆಂಬ ಕಲ್ಪತರುವನ್ನು ಆ ಭಗವತ್ಕೃಪಾ ನದಿಯು ಅಭಿವೃದ್ಧಿಗೊಳಿಸಿ, ಮುನಿಜನರಿಂದ ಬಹುಮಾನಿಸುವುದಕ್ಕೆ ಅರ್ಹವಾದ ಫಲವನ್ನು ಉಂಟುಮಾಡುವುದು.

(ಪುನಃ ತೆರೆಯಲ್ಲಿ ದುಂದುಭಿಧ್ವನಿಯಾಗುವುದು.)

(ಇಬ್ಬರೂ ಕಿವಿಗೊಟ್ಟು ಕೇಳುವರು.

ಸುಮತಿ—(ಆಶ್ಚರ್ಯದಿಂದ) ಆರ್ಯಪುತ್ರನೇ, ಕುಲಪತಿಯಾದ ಜೀವಾತ್ಮನಿಗೆ ಮೋಕ್ಷೋತ್ಸವದ ಮಂಗಳವಾದ್ಯಕ್ಕೆ ಈಗ ಕಾಲವಲ್ಲ. ಆನೆಗಳ ಸಮೂಹಗಳು ಇನ್ನೂ ಯುದ್ಧದಲ್ಲಿ ಉದ್ಯುಕ್ತಗಳಾಗಿಲ್ಲ. ಹಾಗಾದರೂ ಪ್ರಳಯಕಾಲದಲ್ಲಿ ಉಂಟಾಗುವ ಮೇಘಗರ್ಜನೆಯಂತಿರುವ ಈ ದುಂದುಭಿಯನ್ನು ಯಾರು ಹೊಡೆಯುವರು? ಅಂತರಿಕ್ಷವೆಲ್ಲವನ್ನೂ ಈ ಧ್ವನಿಯು ಶಬ್ದಮಯವಾಗಿ ಮಾಡುವುದು.

ರಾಜ—ಪ್ರಿಯಳೇ, ನಮ್ಮ ವಿಜಯಸನ್ನಾಹವನ್ನು ಹೆಚ್ಚಿಸುವ ದೇವತೆಗಳು ದೇವದುಂದುಭಿಯನ್ನು ಹೊಡೆಯುತ್ತಿರುವರು. ಆದುದರಿಂದ ಈಗ ನಾವು ಸ್ವಪಕ್ಷವನ್ನು ಸ್ಥಾಪಿಸಿದ್ದಾಯಿತು. ಪರಪಕ್ಷವನ್ನು ತಿರಸ್ಕರಿಸಬೇಕಾಗಿದೆ. ಅದಕ್ಕೆ ಪ್ರಯತ್ನಿಸಬೇಕು (ಎಂದು ಇಬ್ಬರೂ ಹೋಗುವರು.)

ಇತಿ ಪ್ರಥಮಾಂಕಃ

## ದ್ವಿತೀಯಾಂಕ.



(ಶ್ರದ್ಧೆ, ವಿಚಾರಣೆ ಇಬ್ಬರೂ ಪ್ರವೇಶಿಸುವರು.)

ವಿಚಾರಣೆ—ಸಖಿ, ನಿನ್ನ ಹಣೆಯಲ್ಲಿ ಶ್ರಮಜಲಬಿಂದುಗಳು ಕಾಣುತ್ತಲಿವೆ. ಕರುವನ್ನು ನೋಡುವುದರಲ್ಲಿ ಆಸೆಯುಳ್ಳ ಹಸುವಿನಂತೆ ಬಹು ತ್ವರೆಪಡುತ್ತಲಿದ್ದೀಯೇ. ಚಂದ್ರನಿಂದ ಅಮೃತಬಿಂದುವು ತೊಟ್ಟಿಕ್ಕುವಂತೆ ಬೆವರು ಹನಿಗಳು ನಿನ್ನ ಮುಖದಿಂದ ಹರಿಯುತ್ತಲಿವೆ. ಪ್ರಾಯವೆಂಬ ಬಳ್ಳಿಯ ಮೊಗ್ಗುಗಳ ಕಾಂತಿಯನ್ನು ಬೆವರುಹನಿಗಳು ವಹಿಸುತ್ತಲಿವೆ. ಇಷ್ಟು ತ್ವರೆಗೆ ಕಾರಣವೇನು ?

ಶ್ರದ್ಧೆ—ಪ್ರಿಯಸಖೀ, ಮಹಾರಾಜನಾದ ವಿವೇಕನು ಉಪನಿಷತ್ ಸಿದ್ಧಾಂತಗಳನ್ನು ಏಕಮುಖದಲ್ಲಿ ಐಕಕಂಠ್ಯವನ್ನುಂಟುಮಾಡಿ ಸ್ಥಿರಪಡಿಸಿರುವನು. ಇನ್ನು ಪ್ರತಿಪಕ್ಷಿಗಳನ್ನು ಪರಿಹರಿಸುವುದಕ್ಕೆ ಪ್ರತಿಜ್ಞೆ ಮಾಡಿರುವನು. ಇವನ ಸಹಧರ್ಮಚಾರಿಣಿಯಾದ ಸುಮತಿಯು ಪ್ರಾರಂಭಿಸಿದ್ದು ಸುಖವಾಗಿ ನಿರ್ವಾಹವಾಗಬೇಕೆಂಬ ಕುತೂಹಲದಿಂದ ಮಂಗಳಾಚರಣೆಯನ್ನು ಮಾಡುತ್ತಲಿದಾಳೆ. ಅದಕ್ಕಾಗಿ ಪ್ರಮದವನದ ಪಾರ್ಶ್ವದಲ್ಲಿರುವ ರತ್ನಪರ್ವತವನ್ನು ಹೊಂದಿರುವಳು. ಅಲ್ಲಿ ಲಕ್ಷ್ಮೀಪೂಜೆಗೋಸ್ಕರ ಸುವರ್ಣಕಮಲಗಳನ್ನು ತರುವಂತೆ ನನಗೆ ಆಜ್ಞಾಪಿಸಿ, ಶುಭಾಶಂಸನದಲ್ಲಿ ನೆಟ್ಟ ಮನಸ್ಸುಳ್ಳವಳಾಗಿ, ಸುಖವಾಗಿ ಕುಳಿತಿರುವಳು. ಆದಕಾರಣ ನಾನು ಪ್ರಸನ್ನವಾದ ಪ್ರವಾಹವುಳ್ಳ ಭಾಗೀರಥಿಯನ್ನು ಕುರಿತು ಹೊರಟಿರುವೆನು. (ಮಾರ್ಗಾಯಾಸವನ್ನು ಅಭಿನಯಿಸುತ್ತಾ) ಈ ಗಂಗಾ ನದಿಯು ನೀರಿನಿಂದ ವ್ಯಾಪ್ತವಾದ ಸ್ಥಳದಲ್ಲಿರುವ ಕಲ್ಪವೃಕ್ಷದ ಶಿಖರಕ್ಕೆ ಮಾಧವೀಲತೆಯು ಹಬ್ಬಿ, ಅದರ ವಾಸನೆಯಿಂದ ಕೂಡಿದ ತೆರೆಗಳು ದಶವನ್ನಲಂಕರಿಸುವಂತೆ ಹರಿಯುತ್ತಲಿದೆ. ಈ ಗಂಗಾ ನದಿಯು ಸೈರಿಸುವುದಕ್ಕಾಗದ ಜನ್ಮಗಳಲ್ಲಿ ಸಂಚರಿಸುವ

ಶ್ರಮದಿಂದ ಖೇದಗೊಂಡಿರುವ ಜನಗಳ ದುಃಖಗಳನ್ನು ತನ್ನ ಶುದ್ಧ ಪ್ರ
ಕೃತಿಯಿಂದ ಯಾವಾಗ ಹೋಗಲಾಡಿಸುವುದೋ ತಿಳಿಯಲಿಲ್ಲ.

ವಿಚಾರಣೆ—ಇಗೋ, ಗಂಗಾ ನದಿಯು ಇಲ್ಲಿಯೇ ಇರುವುದು. ಆದ್ದ
ರಿಂದ ಸಾಧುಜನಗಳ ಹೃದಯದಂತೆ ತಣ್ಣಗಿರುವ ಮಂದಮಾರುತವು
ಬೀಸುವುದರಿಂದ ಕಲ್ಪವೃಕ್ಷದಲ್ಲಿರುವ ಹೂವುಗಳು ಮಕರಂದವನ್ನು
ಸುರಿಸಿ, ಅದರ ವಾಸನೆಯಿಂದ ಮನೋಹರವಾಗಿರುವ ಈ ಮಾಧವಿ
ಯ ಲತಾಗೃಹದಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು, ದುರ್ಜನರ ವಚನಗ
ಳಂತೆ ಬಹು ತೀಕ್ಷ್ಣವಾಗಿರುವ ಬಿಸಲಿನ ಶ್ರಮವನ್ನು ಪರಿಹರಿಸಿಕೊಂ
ಡು, ಅನಂತರ ಮುಂದೆ ಹೋಗಬಹುದು. ಇಲ್ಲಿ ಬೀಸುವ ಗಾಳಿ
ಯಿಂದ ಮರಗಳು ಚಲಿಸುತ್ತಾ, ಅವುಗಳ ಕೊಂಬೆಗಳಿಂದ ಹೂವುಗ
ಗಳು ಗುಂಪುಗುಂಪಾಗಿ ಬೀಳುತ್ತಲಿವೆ. ಈ ಪುಷ್ಪಗಳು ಅತಿಶಯ
ವಾದ ವಾಸನೆಯಿಂದ ಕೂಡಿರುವುವು. ಮನ್ಮಥನ ಬಾಣಗಳ ಸಮೂ
ಹದಂತೆ ಕಾಣುವುವು. ಈ ಮರದ ನೆರಳಿನಲ್ಲಿರುವ ಅಪ್ಸರಸ್ತ್ರೀಯರ
ಮುಡಿಗೆ ಮುಡಿಸುವುದಕ್ಕೆ ಯೋಗ್ಯವಾಗಿರುವುವು.

ಶ್ರದ್ಧೆ—ನಿನ್ನ ಇಷ್ಟದಂತೆಯೇ ಆಗಲಿ. (ಇಬ್ಬರೂ ಕುಳಿತುಕೊಳ್ಳು
ವರು.)

ಶ್ರದ್ಧೆ—ಸಖಿ, ವಿಚಾರಣೆ, ನೀನು ಏನು ಕಾರಣ ಇಲ್ಲಿಗೆ ಬಂದೆ ?

ವಿಚಾರಣೆ—ಪ್ರಿಯಸಖಿಯೇ ಕೇಳು, ನಮ್ಮ ವಿವೇಕ ಮಹಾರಾಜನಿಗೆ
ವ್ಯವಸಾಯನೆಂಬ ಸೇನಾಪತಿಯಿರುವನಷ್ಟೆ. ಆ ಸೇನಾಪತಿಯ ಸಹಾ
ಯದಿಂದ ನಮ್ಮ ಮಹಾರಾಜನು ಮಾಡುವ ಸನ್ನಾಹವನ್ನು ಕೇಳಿ, ಮ
ಹಾಮೋಹನು ಕುಪಿತನಾಗಿ, ಬುದ್ಧಜಿನಪ್ರಮುಖ ಮತಾಂತರಗಳ ಸಿ
ದ್ಧಾಂತವನ್ನು ಸ್ಥಾಪನ ಮಾಡುವುದರಲ್ಲಿ ಪ್ರವೀಣರಾದ ಕುಟಿಲಮತಿಗ
ಳೊಂದಿಗೆ ನಾರಾಯಣನ ಚರಣಾರವಿಂದದಲ್ಲಿ ನೆಟ್ಟ ಮನಸ್ಸುಳ್ಳ ಜೀ
ವಾತ್ಮನನ್ನು ರೈತನು ನರಿಯನ್ನು ನೋಡಿ ಉಳುವುದನ್ನು ಬಿಟ್ಟು, ನರಿ
ಯನ್ನನುಸರಿಸಿ ಓಡುವಂತೆ ಅರ್ಥಾಂತರ ಪ್ರಸಂಗದಿಂದ ವಂಚಿಸುವು
ದಕ್ಕೆ ದುರ್ವಾದಿಗಳನ್ನು ನೇಮಿಸಿರುವನು. ಅವರುಗಳು ಬರುತ್ತಿರು
ವರೆಂಬ ಸಮಾಚಾರವನ್ನು ನಮ್ಮ ರಾಣಿಯಾದ ಸುಮತಿಯು ತಿಳಿದು,

ಶತ್ರುಗಳ ಸಮಾಚಾರವನ್ನು ಸೇನಾಪತಿಗೆ ತಿಳಿಸು ಎಂದು ನನಗೆ ಆಜ್ಞಾಪಿಸಿರುವಳು. ನಾನು ವಿವೇಕ ಮಹಾರಾಜನೊಂದಿಗೆ ಆಲೋಚನೆಯಲ್ಲಿರುವ ಸೇನಾಪತಿಯಾದ ವ್ಯವಸಾಯನನ್ನು ನೋಡುವುದಕ್ಕೆ ಬಂದಿರುವೆನು.

ಶ್ರದ್ಧೆ—ಪಿಶಾಚಿಗಳ ವಿವಾಹದಲ್ಲಿ ಕತ್ತೆಯ ಸಂಗೀತವು ಆದಂತಾಯಿತು. ಮಹಾಮೋಹನ ಅಪೇಕ್ಷೆಯಲ್ಲಿ ದುರ್ವಾದಿಗಳ ಸನ್ನಾಹ, ಇರಲಿ. ಇತರ ಸಿದ್ಧಾಂತವನ್ನೆಲ್ಲವನ್ನೂ ನಾಶಮಾಡುವುದು ಮಹಾರಾಜನಿಗೆ ಬಹು ಸುಲಭವು.

ವಿಚಾರಣೆ—ಸಖೀ, ಬೃಹಸ್ಪತಿಯೇ ಮೊದಲಾದವರಿಂದ ರಚಿಸಲ್ಪಟ್ಟು, ಮಹಾಪ್ರಬಲಗಳಾದ ವಿರೋಧಿಗಳ ವಾದಗಳನ್ನು ಒಬ್ಬನೇ ಪರಿಹರಿಸುವನೆಂಬುವುದನ್ನು ನೀನು ಹೇಗೆ ನಿಶ್ಚಯಿಸುವೆ ?

ಶ್ರದ್ಧೆ—ಯಾವುದು ಸತ್ಯವೋ ಅದೇ ನಿತ್ಯವು. ಯಾವುದು ಸುಳ್ಳೋ ಅದು ಈಗ ನಿಜವಂತೆ ಕಂಡಾಗ್ಯೂ, ಇನ್ನೊಂದು ಕಾಲದಲ್ಲಿ ಅದು ಸುಳ್ಳೇ ಆಗುವುದು ಎಂಬ ಜನವಾದದಿಂದ ನೀನೇ ನೋಡುವಿ. ನನ್ನ ಮಾತು ನಿಜವೆಂಬುದು ನಿನಗೇ ತಿಳಿಯುತ್ತದೆ. ಸೂರ್ಯನು ಉದಯವಾಗುವುದಕ್ಕೆ ಮುಂಚೆ ತುಂಬಿದ ಅಗಾಧವಾದ ಅಂಧಕಾರವನ್ನು ಉದಯವಾದೊಡನೆಯೇ ಸೂರ್ಯನು ನಾಶಮಾಡುವನು. ಉರಿಯುವ ಬೆಂಕಿಯು ಸ್ವಲ್ಪವಾಗಿದ್ದಾಗ್ಯೂ, ವಿಂಧ್ಯಪರ್ವತದ ದೊಡ್ಡ ಕಾಡನ್ನು ಸುಡುವುದು. ಗಾಳಿಯು ಬೆಟ್ಟದಷ್ಟು ರಾಸಿಯಾದ ಹತ್ತಿಯನ್ನು ಒಂದು ನಿಮಿಷದಲ್ಲಿ ಎಸೆದುಬಿಡುವುದು. ಅದರಂತೆಯೇ ಪ್ರಭುವಾದ ವಿವೇಕನು ಕಣ್ಣಿನಿಂದ ನೋಡಿದ ವಡನೆಯೇ ಆ ದುರ್ಮತಗಳೆಲ್ಲವನ್ನೂ ಭೇದಿಸುವನು. ಆದ್ದರಿಂದ ವಿವೇಕನನ್ನು ಜಯಿಸಬೇಕೆಂಬ ಅಪೇಕ್ಷೆಯಿಂದ ಮಹಾಮೋಹನು ಕುಟಿಲಮತಿಗಳನ್ನ ಸೇರಿಸಿಕೊಂಡಿರುವುದು ಸಮುದ್ರವನ್ನು ದಾಟುವುದಕ್ಕೆ ಅಪೇಕ್ಷೆಯುಳ್ಳವನು ಬಂಡೆಯ ಸಹಾಯವನ್ನು ಬಯಿಸಿದಂತಾಗಿದೆ.

ವಿಚಾರಣೆ—ಪ್ರಿಯಸಖೀ, ನಿನ್ನ ಮಾತಿನಿಂದ ನನಗೆ ಸಮಾಧಾನ ಉಂಟಾಯಿತು. ನನ್ನ ಸಂದೇಹವು ದೂರವಾಯಿತು. ಮಹಾರಾಣಿಯ ಅಪ್ಪಣೆಯನ್ನು ನೆರವೇರಿಸುವೆನು.

ಶ್ರದ್ಧೆ—ಸಖಿಯೇ, ನಾನೂ ಕೂಡ ಕಮಲಗಳನ್ನು ಕುಯ್ಯುವುದಕ್ಕೆ ಹೊರಟು ಹೋಗುವೆನು. ನೀನೂ ಅರಮನೆಗೆ ಹೋಗು (ಎಂದು ಇಬ್ಬರೂ ಹೋಗುವರು.)

(ರಾಜನೂ, ವ್ಯವಸಾಯನೂ ಇಬ್ಬರೂ ಪ್ರವೇಶಿಸುವರು.)

ರಾಜ—ಸೇನಾಪತಿಯೇ, ಜೀವಾತ್ಮನು ಅತಿ ಕಠಿನವಾದ, ಅನೇಕ ಕರ್ಮಪಾಶಗಳಿಂದ ದೃಢವಾಗಿ ಕಟ್ಟಲ್ಪಟ್ಟಿರುವನು. ಆದ್ದರಿಂದ ಅಡಿಗಡಿಗೂ ಇವನ ವ್ಯಾಪಾರಗಳೆಲ್ಲವೂ ವ್ಯರ್ಥವಾಗುತ್ತಲಿವೆ. ಬಹಳ ಮೋಹಗೊಂಡಿರುವನು. ಈ ಜೀವನ ಸಂಸಾರವನ್ನು ಬಿಡಿಸಬೇಕೆಂದು ನಾನು ದೀಕ್ಷಿತನಾಗಿರುವೆನು. ಅಂಥಾ ನನಗೆ ಸಕಾಲವಾಗಿರುವುದು ಮೋಕ್ಷಮಾರ್ಗದಲ್ಲಿ ಮಾಡಿದ್ದು, ಮಾಡದೆ ಇರುವುದು, ಇದನ್ನು ವಿಚಾರಮಾಡಿ, ಮಾಡದೆ ಉಳಿದಿರುವುದನ್ನು ನಿಶ್ಚಯಿಸಿಕೊಂಡು, ಮುಂದಿನ ಕೆಲಸವನ್ನು ಆರಂಭಿಸಬೇಕು. (ಒಂದು ಮುಹೂರ್ತ ಹಾಗೆಯೇ ನಿಂತು, ಬಹು ದುಃಖದಿಂದ) ಈ ಕಲಿಯುಗವು ಅನಭಿಜ್ಞರಾದ ಜನಗಳಿಂದ ತುಂಬಿಹೋಗಿರುವುದು. ಇವರುಗಳು ದೈವದುರ್ವಿಪಾಕದಿಂದ ಪ್ರಪಂಚದಲ್ಲಿ ಹುಟ್ಟಿ, ಏನೂ ಅರಿಯದೆ, ನಿರಪರಾಧಿಗಳಾದ ಜನಗಳಲ್ಲಿ ಕಾರಣವಿಲ್ಲದೆ ಕಲಹವನ್ನು ಮಾಡುತ್ತಾ, ನಾನಾವಿಧವಾದ ಸಿದ್ಧಾಂತಗಳನ್ನು ಕಲ್ಪಿಸಿಕೊಂಡು, ತಮ್ಮ ಶಿಷ್ಯರುಗಳಿಗೆ ಬೋಧಿಸುತ್ತಲಿರುವರು. ಹೀಗೆ ಮರಳುಗೊಳಿಸುವ ನಾನಾವಿಧವಾದ ಸಿದ್ಧಾಂತಗಳಲ್ಲಿ ಸಿಕ್ಕಿ ತೊಳಲುತ್ತಲಿರುವ ಈ ಜಗತ್ತಿನಲ್ಲಿ ವೇದಾಂತ ವಿದ್ಯೆಯು ಹೇಗೆ ಸ್ಥಿರವಾಗಿ ನಿಲ್ಲುವುದೋ ? ಕಷ್ಟ ! ಕಷ್ಟ ! (ಆಕಾಶದಲ್ಲಿ ದೃಷ್ಟಿಯಿಟ್ಟು) ಎಲೈ ನೀಚನಾದ ಮಹಾಮೋಹನೇ, ಈ ಮೂರು ಲೋಕವನ್ನೂ ಮೋಹಗೊಳಿಸುವುದರಿಂದ ನಿನಗೇನು ಸಿಕ್ಕುತ್ತದೆ ? ಮುಂದೆ ತಾನೇ ನಿನಗೇನು ಲಾಭ ? ಮತ್ತು ಭೂಮಿಯಲ್ಲಿ ಕಣಗಲೇ ಗಿಡಗಳು ಎಲ್ಲೆಲ್ಲಿಯೂ ಸಿಕ್ಕುವುವು. ಮೃತಸಂಜೀವಿನಿಯು ಮಾತ್ರ

ಹುಡಿಕಿದರೂ ಸಿಕ್ಕುವುದಿಲ್ಲ. ಆದ್ದರಿಂದ ಈ ವಿಧವಾದ ತೊಂದರೆಗ
ಳು ಪರಿಹೃತವಾಗುವುದಕ್ಕೋಸ್ಕರ ಭಗವಂತನಾದ ಹಯಗ್ರೀವಮೂ
ರ್ತಿಯನ್ನು ಶರಣುಹೊಂದುವೆನು. ಹಯಗ್ರೀವನೇ, ನಿನ್ನ ದೇಹದ
ಕಾಂತಿಯು ಸ್ಫಟಿಕಮಣಿಯಿಂದ ನಿರ್ಮಿತವಾದ ಪರ್ವತದಂತೆ ಶುದ್ಧ
ವಾಗಿರುವುದು. ಅಮೃತಕ್ಕೆ ಸಮಾನವಾದ ನಿನ್ನ ಆ ಕಾಂತಿಗಳಿಂದ
ಮೂರು ಲೋಕದ ಸಂಸಾರದ ತಾಪಗಳೆಲ್ಲವೂ ನಾಶವಾಗುವುವು. ನಿನ್ನ
ಹೇಷಾಧ್ವನಿಯು ಉಪನಿಷತ್ತಾಗಿ ಪರಿಣಮಿಸಿರುವುದು. ಅಖಿಲ ಹೇ
ಯಪ್ರತ್ಯನೀಕನಾದ ನಿನ್ನನ್ನು ಸ್ತೋತ್ರಮಾಡುವೆನು. ನಿನ್ನ ಹೇಷಾ
ಧ್ವನಿಯು ಋಗ್ಯಜುಸ್ಸಾಮಾಥರ್ವಣ ವೇದಗಳ ಸಮುದಾಯವಾಗಿ
ರುವುದು. ವಿಘ್ನಗಳನ್ನು ನಾಶಮಾಡುವುದು, ಸಮುದ್ರದಲ್ಲಿ ಅಲೆಗಳು
ಪರಂಪರೆಯಾಗಿ ಉಂಟಾಗುವಂತೆ ಜ್ಞಾನವು ತರಂಗತರಂಗವಾಗಿ ಉದ್ಭ
ವಿಸುವಂತೆ ಮಾಡುವುದು, ಇಂತಹ ನಿನ್ನ ಹೇಷಾಧ್ವನಿಯು ನನ
ಗೆ ಸಮಾನರಿಲ್ಲವೆಂದು ಅಹಂಕಾರದಿಂದ ಅಪಥಪ್ರವರ್ತಕರಾದ ದುರ್ವಾ
ದಿಗಳ ಕೋಲಾಹಲದಿಂದ ಉಂಟಾಗಬಹುದಾದ ಮಾಂಧ್ಯವನ್ನು ಪರಿಹ
ರಿಸಿ ಕಾಪಾಡಲಿ.

ಸೇನಾಪತಿ—ಮಹಾರಾಜನೇ, ನಿನ್ನ ಆರಂಭಗಳೆಲ್ಲವೂ ಸಫಲವಾಗುವುವು.
ರಾವಣನಿಗೆ ಕೊಟ್ಟ ಅನರಣ್ಯನ ಶಾಪವು ಹೇಗೆ ವ್ಯರ್ಥವಾಗಲಿಲ್ಲವೋ
ಹಾಗೆ ಮಹಾಮೋಹನ ನಾಶವನ್ನು ಹೇಳುವ ಉಪನಿಷದ್ವಾದವೂ ಸಹ
ನಿನ್ನ ಮಹಿಮೆಯಿಂದ ವ್ಯರ್ಥವಾಗುವುದಿಲ್ಲ. ಈಗ ನೀನು ಉಪನಿಷ
ತ್ತಿನ ವಿಜ್ಞಾನವನ್ನು ಅಂದರೆ, ವಿಷ್ಣುವೇ ಪರತತ್ವವು. ಅವನೇ ಉ
ಪಾಸ್ಯ ದೈವವು. ಅವನೇ ಮೋಕ್ಷಪ್ರದನು ಎಂಬ ಅಂಶವನ್ನು ಪ್ರ
ಕಾಶಪಡಿಸಿರುತ್ತೀಯೆ. ಇನ್ನು ಮೇಲೆ ವೇದಾಂತದಲ್ಲಿ ಮತಾಂತರಗ
ಳ ಪ್ರಾಬಲ್ಯದಿಂದ ಶಿಥಿಲವಾಗುತ್ತಿರುವ ಶ್ರದ್ಧೆಯನ್ನು ಸ್ಥಿರಗೊಳಿಸ
ಬೇಕು.

ರಾಜ—(ಸಂತೋಷದಿಂದ) ಭದ್ರಪುರುಷನೇ, ನನ್ನನ್ನು ಎಚ್ಚರಗೊಳಿಸಿ
ದೆ. ಶುಭವೃತ್ತನಾದ ನೀನು ನನಗೆ ಸಹಾಯಕನಾಗಿರುವುದರಿಂದ ಉ
ಳಿದಿರುವ ಕೆಲಸವೂ ಸಹ ಪೂರ್ಣವಾದಂತೆಯೇ ನಿಶ್ಚಯಿಸುತ್ತೇನೆ.

ವಿವೇಕಾದಿಗಳನ್ನು ಜಯಿಸುವೆನೆಂದು ಆಶೆಯುಳ್ಳ ಮಹಾಮೋಹನ ಶ್ರ
ದ್ಧೆಯನ್ನು ನಾಶಮಾಡುವುದರಲ್ಲಿ ಆಸಕ್ತರಾಗಿರುವ ಶಮದಮಾದಿಗಳು
ಅನೇಕರಿರುವರು. ಅವರು ಇರಲಿ. ನಾರಾಯಣನಿಗೆ ಅನನ್ಯಚಿತ್ತ
ನಾದ ವಿಷ್ವಕ್ಸೇನನೆಂಬ ಸೇನಾಪತಿಯು ರಾಕ್ಷಸ ಸಂಹಾರದಲ್ಲಿ ಸಹಾ
ಯನಾಗಿರುವಂತೆ ದೋಷರಹಿತನಾದ ನೀನೂ ಕೂಡ ಶತ್ರುವಾದ ಮ
ಹಾಮೋಹನನ್ನು ನಿರಸನ ಮಾಡುವುದರಲ್ಲಿ ನನಗೆ ಸಹಾಯಕನಾಗಿರು
ತ್ತೀಯೆ.

ಸೇನಾಪತಿ—ರಾಜನೇ, ಆಯುಧದಂತೆ ಇತರರಲ್ಲಿ ಪ್ರಯೋಗಿಸುವ ವಿಷ
ಯದಲ್ಲಿ ನಿನಗೆ ಅಧೀನನಾಗಿಯೇ ಇರುವೆನು. ನೀನು ತಡೆಯಿಲ್ಲದೆ ಒ
ದಗುವ ವೇದವೇ ಮೊದಲಾದ ಪ್ರಮಾಣಗಳಿಂದ, ಪ್ರತಿವಾದಿ ದೂಷಣೆಗ
ಳಿಗೆ ಅವಕಾಶಕೊಡದೆ ಸ್ಥಿರನಾಗಿರುತ್ತೀಯೆ. ಸ್ವಪಕ್ಷಸಾಧನದಲ್ಲಿಯೂ,
ಪರಪಕ್ಷ ದೂಷಣದಲ್ಲಿಯೂ ಸ್ವಚ್ಛಂದವಾಗಿ ಪ್ರಸಿದ್ಧವಾದ ಶೌರ್ಯವು
ಳ್ಳವನಾಗಿರುವನಾದ್ದರಿಂದ ಸಮಸ್ತ ನಿಶ್ಚಯಗಳೂ ನಿನ್ನ ಅಧೀನವಾಗಿ
ಯೇ ಇವೆ. ಆದುದರಿಂದ ಯಾವ ತೊಂದರೆಯೂ ಇಲ್ಲದೆ ಒದಗಿಬರುವ
ಚಿಂತಾಫಲರೂಪವಾದ ಜ್ಞಾನ, ದರ್ಶನ, ಪ್ರಾಪ್ತಿ ಇವುಗಳುಳ್ಳ ನಿನಗೆ ಇ
ರುವುದರಲ್ಲಿಯೂ, ನಿಲ್ಲುವುದರಲ್ಲಿಯೂ, ಇತರ ವ್ಯಾಪಾರಗಳಲ್ಲಿಯೂ
ನಾನು ನೆರಳನಂತಿರುವೆನು. ಆದಕಾರಣ ನಾನಾಗಲೀ, ಸುಮತಿಯಾಗ
ಲೀ ನಿನ್ನನ್ನು ಬಿಟ್ಟು ನೀರಿನಿಂದ ತೆಗೆದ ಮೀನಿನಂತೆ ಒಾದು ಮುಹೂ
ರ್ತವೂ ಬದುಕಲಾರೆವು.

ರಾಜ—(ಹಾಗೆಯೇ ಯೋಚಿಸಿ) ಸೇನಾಪತಿಯೇ, ಅಸುರ ವಿಮೋಹನಾ
ರ್ಥವಾಗಿ ಕೆಲವು ಮೋಹಶಾಸ್ತ್ರಗಳು ಸ್ವಲ್ಪ ಆಯಾಸದಿಂದ ಶೀಘ್ರಫಲ
ವನ್ನು ಕೊಡುವಂತೆ ಮಹಾತ್ಮರಿಂದ ರಚಿಸಲ್ಪಟ್ಟವು ಅವು ವೇದಾಂ
ತಪ್ರಮಾಣಕ್ಕೆ ವಿರುದ್ಧವಾದ ಅರ್ಥಗಳುಳ್ಳವುಗಳು ಆದ್ದರಿಂದ
ಮುಟ್ಟುವುದರಿಂದಲೇ ಬೆಂಕಿಯಲ್ಲಿ ಬಿಸಿಯು ತೋರುವಾಗ, ಅದು ತ
ಣ್ಣಗಿರುವುದೆಂದು ಸಾಧಿಸಲು ಆರಂಭಿಸುವ ವಾಕ್ಯಗಳಂತೆ ಬಾಧಿತಾ
ರ್ಥಗಳುಳ್ಳವುಗಳಾಗಿವೆ. ಆದರೂ ಇವುಗಳು ಸೂರ್ಯನು ಅಸ್ತಮಯ
ವಾದರೆ ಕವಿಯುತ್ತಲೂ, ಉದಯವಾದರೆ ನಷ್ಟವಾಗುತ್ತಲೂ, ಪುನಃ

ಅಸ್ತವಾದರೆ ಕವಿಯುತ್ತಲೂ ಇರುವ ಕತ್ತಲೆಯಂತೆ ವೇದವಾದ ವಿಶಾರದರ ಅಭಾವದಲ್ಲಿ ಪ್ರಪಂಚದಲ್ಲಿ ಎಲ್ಲಾ ಕಡೆಯಲ್ಲಿಯೂ ಹರಡಿಕೊಳ್ಳುತ್ತಲಿವೆ. ಇಂತಹ ಮತಗಳನ್ನು ಪರಿಗ್ರಹಿಸಿರುವ ವಾದಿಗಳು ನಾರಾಯಣ ಭುಜಬಲದಿಂದ ಕ್ಷೀರಸಮುದ್ರವನ್ನು ಕಡೆಯುವಾಗ ಉಂಟಾದ ಘೋಷದಂತೆ ನಿರರ್ಥಕವಾದ ವಿವಿಧ ವಚನರಚನೆಗಳುಳ್ಳವರಾಗಿ, ಬೃಹಸ್ಪತಿಯನ್ನು ವನಸ್ಪತಿಯನ್ನಾಗಿ ಮಾಡಲು ಉದ್ಯೋಗಿಸುವರು. ಶುಷ್ಕ ತರ್ಕನಿಷ್ಠರಾದ, ಪ್ರಚಂಡರಾದ ಇವರು ಬಾಳೆಯ ತೋಟಗಳನ್ನು ಆನೆಗಳು ನಾಶಮಾಡುವಂತೆ ವೇದಾಂತ ಮಾರ್ಗದಲ್ಲಿರುವ ವಿಶ್ವಾಸವನ್ನು ನಾಶಮಾಡುತ್ತಲಿರುವರು. ಆನೆಗಳನ್ನು ಅಡಗಿಸುವುದಕ್ಕೆ ಪರಾಕ್ರಮಶಾಲಿಯಾಗಿಯೂ, ಆರಣ್ಯಕವರ್ತಿಯಾಗಿಯೂ ಅಂದರೆ, ಉಪನಿಷದರ್ಥವನ್ನು ಸರಿಯಾಗಿ ತಿಳಿದವನಾಗಿಯೂ, ಪ್ರಮಾಣಗಳೆಂಬ ಪರಾಕ್ರಮವುಳ್ಳವನಾಗಿಯೂ ಇರುವ ವಾದಿಯು ಬೇಕು. ಆ ವಾದಿಯು ಸಿಂಹಕ್ಕೆ ಐದು ಉಗುರುಗಳಿರುವಂತೆ ವ್ಯಥತರವಾದ ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕಾಶ್ರಯ, ಅನವಸ್ಥಾ, ಅನಿಷ್ಟ ಪ್ರಸಂಗಗಳೆಂಬ ತರ್ಕಪಂಚಕಗಳನ್ನು ಆಶ್ರಯಿಸಿರಬೇಕು. ಅವನಿಗೆ ಸ್ವಪಕ್ಷಸಾಧನ ಪರಪಕ್ಷೋಪಾಲಂಭಗಳೆಂಬ ಎರಡು ದಂಷ್ಟ್ರಾಂಕುರಗಳಿರಬೇಕು. ಇಂತಹ ವಾದಿಯು ಪ್ರತಿವಾದಿಗಳೆಂಬ ಆನೆಗಳಿಗೆ ಸಿಂಹನಾಗುವನು.

ಸೇನಾಪತಿ—ರಾಜನೇ, ವಾದನನ್ನೂ, ವೇದಾಂತ ಸಿದ್ಧಾಂತನನ್ನೂ ಸಹ ಪ್ರತಿಮತನಿರ್ಮೂಲನಕ್ಕಾಗಿ ನೀನೇ ನೇಮಿಸಿರುವಿಯಷ್ಟೆ. ಆ ವಾದಯುದ್ಧವು ಸಮೀಪಿಸಿರುವುದು. (ಗುರುಶಿಷ್ಯ ವೇಷಗಳನ್ನು ಧರಿಸಿರುವ ವೇದಾಂತಸಿದ್ಧಾಂತವಾದರು ಪ್ರವೇಶಿಸುವರು.)

ಗುರು—ಆಯುಷ್ಮಂತನೇ, ಪರಮಾರ್ಥಗಳನ್ನು ಚನ್ನಾಗಿ ನೀನು ತಿಳಿದುಕೊಂಡಿರುವೆ. ಪ್ರತಿವಾದಿಗಳೆಂಬ ಲಂಕಾಭಟರುಗಳಿಗೆ ಆಂಜನೇಯನಾಗಿರುವೆ. ಆದುದರಿಂದ ನೀನು ಕಂಭವನ್ನು ಅಳ್ಳಾಡಿಸಿ, ಸ್ಥಿರವಾಗುವಂತೆ ಮಾಡುವ ಕ್ರಮದಿಂದ ವೇದಾಂತ ತತ್ವವನ್ನು ಸ್ಥಿರವಾಗುವಂತೆ ಮಾಡಬೇಕು.

ಶಿಷ್ಯ—(ವಿನಯದಿಂದ) ಪೂಜ್ಯರೇ, ದಿವ್ಯವಾದ ಯತೀಂದ್ರ ವೇಷದಿಂದ ಮಹರ್ಷಿಗಳಿಂದಲೂ ಸ್ಮರಿಸಲ್ಪಡುತ್ತಲಿರುವ ದತ್ತಾತ್ರೇಯರಂತೆ ಕಾಣುವಿರಿ. ಪೂರ್ವದಲ್ಲಿ ಕಾಣಾದ, ಬೌದ್ಧರೇ ಮೊದಲಾದವರಿಂದ ವೈದಿಕ ಧರ್ಮಗಳು ನಾಶವಾಗಲ್ಪಟ್ಟದ್ದವು. ಆ ಸಮಯದಲ್ಲಿ ವಿಷ್ಣುವು ತ್ರಿದಂಡವನ್ನು ಧರಿಸಿ, ದತ್ತಾತ್ರೇಯ ರೂಪದಿಂದ ಆ ವೈದಿಕ ಧರ್ಮವನ್ನು ಕಾಪಾಡಿದನು ಎಂದು ಕೇಳಿದೇವೆ.

ಗುರು—ಆಯುಷ್ಮಂತನೇ, ಈ ಅವೈದಿಕರುಗಳೂ, ಕುಟಿಲಮತಿಗಳೂ ಸಹ ರಾಕ್ಷಸರೇ ಅಲ್ಲವೆ, ನಾನು ಅವರುಗಳನ್ನು ವಿಷ್ಣುರೂಪವನ್ನು (ಸನ್ಯಾಸವನ್ನು) ಆಶ್ರಯಿಸಿ ಜಯಿಸಲಪೇಕ್ಷಿಸುತ್ತೇನೆ

ಶಿಷ್ಯ—ಪೂಜ್ಯರೇ, ನೀವು ವಿಷ್ಣುರೂಪಿಗಳಾದ್ದರಿಂದ ವಿಷ್ಣುಭಾವದಿಂದಲೇ ತಮ್ಮನ್ನು ನಮಸ್ಕರಿಸಬೇಕು. ತಾವು ಊರ್ಧ್ವಪುಂಡ್ರವನ್ನು ಧರಿಸಿ, ಉಪವೀತವನ್ನು ಧರಿಸಿರುವಿರಿ. ತಮ್ಮ ಕೈಯಲ್ಲಿರುವ ತ್ರಿದಂಡವು ಮೂರು ಲೋಕದ ಪುಣ್ಯಫಲಗಳು ಒಂದಾಗಿ ಸೇರಿದಂತೆ ಮೂರು ದಂಡಗಳುಳ್ಳದ್ದಾಗಿ ಶೋಭಿಸುತ್ತಿರುವುದು. ಶರಣಾಗತರನ್ನು ಸಂರಕ್ಷಿಸುವ ಭಾರವನ್ನು ಧರಿಸಿರುವಿರಿ. ಶಿಖೆಯಿಂದ ಅಲಂಕೃತವಾದ ಶಿರಸ್ಸುಳ್ಳ ತಮ್ಮನ್ನ ನಮಸ್ಕರಿಸುವೆನು (ಎಂದು ಸಾಷ್ಟಾಂಗ ಪ್ರಣಾಮ ಮಾಡುವನು.)

ಗುರು—ಆಯುಷ್ಮಂತನೇ, ವೇದಾಂತ ಸಿದ್ಧಾಂತವನ್ನು ಸ್ಥಿರಗೊಳಿಸಿ, ಬಾಹ್ಯಸಿದ್ಧಾಂತಗಳನ್ನು ನಿರಸನ ಮಾಡಿ, ವೈದಿಕರುಗಳಿಗೆ ಮಾನ್ಯನಾಗಿ, ಅನಂತ ಮಂಗಳಗಳಿಗೆ ಪಾತ್ರನಾಗು (ಎಂದು ದಿವ್ಯಶಕ್ತಿಯುಳ್ಳ ದರ್ಭೆಯ ಪವಿತ್ರವನ್ನು ಕೊಡುವರು. ಶಿಷ್ಯನು ಅದನ್ನು ತೆಗೆದುಕೊಂಡು, ತಲೆಯ ಮೇಲಿಟ್ಟುಕೊಂಡು, ಬಲಗೈಯಲ್ಲಿ ಧರಿಸುವನು.)

ಗುರು—ಆಯುಷ್ಮಂತನೇ, ಮಸುಸಿದ್ಧಾದಿಗಳಿಗೆ ಸುಲಭವಾಗಿರುವ ಪರಬ್ರಹ್ಮಾನಂದಾನುಭವವು ಮಧುಸಹಿತವಾದ ಕ್ಷೀರದಂತೆ ಪರಬ್ರಹ್ಮನ ಸ್ವರೂಪ, ಸತ್ಯ, ಜ್ಞಾನ, ವಿಭೂತಿ, ಇವುಗಳ ಅನುಸಂಧಾನದಿಂದಲೂ, ಚೇತನನ ಅಪಹತಪಾಪ್ಮತ್ವಾದಿ ಗುಣ ಸಂಪತ್ತುಗಳ ಅನುಧ್ಯಾನದಿಂದ

ಲೂ ಅತಿಶಯವಾಗಿ ಆದರಪುರಸ್ಸರವಾಗಿ ನಿನ್ನ ಮನಸ್ಸಿನಲ್ಲಿ ಬಹು ವಿ ಧವಾಗಿ ಯಾವಾಗಲೂ ಪ್ರವಹಿಸುತ್ತಿರಲಿ.

ಶಿಷ್ಯ—(ವಿನಯದಿಂದ) ಅಮೋಘವಾದ ತಮ್ಮ ಆಶೀರ್ವಾದ ಪ್ರಸಾದದಿಂದ ನನ್ನ ಸರ್ವಾಭೀಷ್ಟವೂ ಸಿದ್ಧಿಸಿತು. ಗುರುಗಳೇ, ಸ್ವಲ್ಪ ಪ್ರಶ್ನೆ ಮಾಡಬೇಕೆಂದಿದೇನೆ. ನಾನು ತಮ್ಮ ಉಪದೇಶಕ್ಕೆ ಅರ್ಹನಾಗಿದ್ದರೆ, ಅಪ್ಪಣೆ ಕೊಡಿಸಬೇಕು.

ಗುರು—ಸಮಸ್ತವಾದ ಶಿಷ್ಯಗುಣಗಳಿಂದ ಕೂಡಿ, ಕೇಳುವುದಕ್ಕೆ ಅಭಿಲಾಷೆಯುಳ್ಳ ಶಿಷ್ಯನಿಗೆ ಯೋಗ್ಯವಾದ ಕಾಲದಲ್ಲಿ ಯಾವುದನ್ನು ತಾನೇ ಹೇಳಬಾರದು ?

ಶಿಷ್ಯ—ಪೂಜ್ಯರೇ, ಜಯಿಸುವ ಅಪೇಕ್ಷೆಯಿಂದ ವಾದಮಾಡಿ, ಬ್ರಾಹ್ಮಣನನ್ನು ಗೆದ್ದು ಸಂತೋಷಪಟ್ಟರೆ, ಸ್ಮಶಾನದಲ್ಲಿ ಹದ್ದುಕಾಗೆಗಳಿಂದ ಕೂಡಿದ ವೃಕ್ಷಜನ್ಮವನ್ನು ಹೊಂದುವನೆಂದು ಮಹರ್ಷಿಗಳು ಈ ರೀತಿಯಲ್ಲಿ ವಾದಮಾಡುವುದನ್ನು ನಿಷೇಧ ಮಾಡಿರುವರು. ಆದ್ದರಿಂದ ಈಗ ವಿಪಕ್ಷರಾದ ವಾದಿಗಳನ್ನು ಜಯಿಸುವುದು ಹೇಗೆ ?

ಗುರು—(ಪರಮಾನುಗ್ರಹದಿಂದ) ಆಯುಷ್ಮಂತನೇ, ಸಾಧುಬುದ್ಧಿಯುಳ್ಳ ನೀನು ಸರಿಯಾಗಿ ಪ್ರಶ್ನೆಮಾಡಿದೆ. ಆದರೆ ವಿಧಿನಿಷೇಧಗಳು ಬ್ರಾಹ್ಮಣಾದಿ ವರ್ಣಗಳಿಗೂ, ಬ್ರಹ್ಮಚರ್ಯಾದ್ಯಾಶ್ರಮಗಳಿಗೂ ಋಗ್ ಯಜುಸ್ಸಾಮಾದಿ ಶಾಖೆಗಳಿಗೂ, ವೈಷ್ಣವಾದಿ ಕುಲಗಳಿಗೂ, ದ್ರವಿಡ, ಕರ್ಣಾಟಾದಿ ದೇಶಗಳಿಗೂ, ಅಹೋರಾತ್ರಾದಿ ಕಾಲಗಳಿಗೂ ತಕ್ಕಂತೆ ವ್ಯವಸ್ಥಿತಗಳಾಗಿರುವುವು. ಆದ್ದರಿಂದ ನಾನು ಈಗ ಅಂಗೀಕರಿಸಿರುವ ನಿಯಮಕ್ಕೆ ಅನುಗುಣವಾಗಿ ವಿಪಕ್ಷ ನಿರಸನವನ್ನು ನಾನಾಗಿಯೇ ಮಾಡದೆ, ವಿಶ್ವಾಮಿತ್ರನು ರಾಮನನ್ನು ಮುಂದಿಟ್ಟುಕೊಂಡು, ರಾಕ್ಷಸರನ್ನು ಜಯಿಸಿದಂತೆ ನಿನ್ನನ್ನು ಮುಂದಿಟ್ಟುಕೊಂಡು, ದುರ್ವಾದಿಗಳನ್ನು ಜಯಿಸಲು ಅಪೇಕ್ಷಿಸಿರುತ್ತೇನೆ. ನೀನು ವಾದದಲ್ಲಿ ಸ್ವಪಕ್ಷಸ್ಥಾಪನವಿಲ್ಲದ ವಿತಂಡಾವಾದವನ್ನಾಗಲೀ, ಜಯಿಸಲಪೇಕ್ಷೆಯೆಂಬ ಜಲ್ಪವನ್ನಾಗಲೀ ಮಾಡದೆ, ತತ್ವನಿರ್ಣಯಾರ್ಥವಾಗಿ ಹೊರಟ ಸ್ಥಿರವಾದ ವಾದಸ್ವರೂಪನಾಗಿ, ಶತ್ರುಗಳನ್ನು ನಿಗ್ರಹಿಸು. ಅಥವಾ ವಿಶ್ವಾಮಿತ್ರನ ಅಪ್ಪ

ಣೆಯಿಂದ ರಾಮನು ಬಲಾತಿಬಲಗಳೆಂಬ ವಿದ್ಯೆಯನ್ನು ಪಡೆದು, ರಾಕ್ಷಸಜಯಕ್ಕೆ ಅಧಿಕಾರವನ್ನು ಹೊಂದಿದಂತೆ ವೇದವಿದೂಷಕರನ್ನೂ, ಈಶ್ವರ ದೂಷಕರನ್ನೂ ಜಯಿಸಬೇಕಾದ ಸಂದರ್ಭವು ಒದಗಿದಾಗ, ತತ್ತ್ವಾಧ್ಯವಸಾಯವನ್ನು ಸಂರಕ್ಷಿಸುವುದಕ್ಕೋಸ್ಕರ ಜಲ್ಪವಿತಂಡಾವಾದಗಳನ್ನೂ ಕೂಡ ಉಪಯೋಗಿಸು.

ಶಿಷ್ಯ—(ಕೈಮುಗಿದುಕೊಂಡು) ತಮ್ಮ ಅಪ್ಪಣೆಯನ್ನು ಶಿರಸಾವಹಿಸಿದೆನು. ಆದರೂ ಜಗದಾಚಾರ್ಯರಾದ ತಾವು ಅಲ್ಪನಾದ ನನ್ನ ಮೇಲೆ ಇಷ್ಟು ದೊಡ್ಡ ಹೊರೆಯನ್ನು ಹೇಗೆ ಹೊರಿಸೋಣವಾಯಿತು ?

ಗುರು—ಕೇಳು, ನನ್ನ ಶಿಷ್ಯರುಗಳು ಹೇಳಿಕೊಟ್ಟದ್ದಕ್ಕಿಂತಲೂ ಹೆಚ್ಚಾಗಿ ಊಹಿಸಿ ತಿಳಿದುಕೊಳ್ಳುವ ಸಾಮರ್ಥ್ಯವುಳ್ಳವರಾಗಿಯೂ, ಇತರರನ್ನು ಗೆಲ್ಲುವುದರಲ್ಲಿ ಅತಿ ಪರಿಚಯವುಳ್ಳವರಾಗಿಯೂ ಈ ಭೂಮಂಡಲದಲ್ಲಿ ಅನೇಕರಿರುವರು. ಅವರೊಳಗೆ ಅದ್ಭುತವಾಗಿ ಪ್ರಸರಿಸುವ ಬುದ್ಧಿಯಿಂದ ಕೂಡಿರುವ ನಿನ್ನನ್ನು ಬಿಟ್ಟು, ಇತರರು ಪ್ರತ್ಯರ್ಥಿಗಳಿಂದಲಾಗಲೀ, ನನ್ನಿಂದಲಾಗಲೀ ವಿಶ್ವಾಸದಿಂದ ಪರಿಗ್ರಹಿಸಲ್ಪಟ್ಟಿಲ್ಲ. ಆದ್ದರಿಂದ ನಿನ್ನ ಮೇಲೆಯೇ ಈ ಹೊರೆಯನ್ನು ಹೊರಿಸಿರುವೆನು.

ಶಿಷ್ಯ—ತಮ್ಮ ಆಜ್ಞೆಯಂತೆ ನಡೆಯಲು ಸಿದ್ಧನಾಗಿರುವೆನು. ಸಿದ್ಧಾಂತವನ್ನು ಬಿಟ್ಟು, ಯಾವ ಕಥೆಯೂ ನಡೆಯುವುದಕ್ಕವಕಾಶವಿಲ್ಲ. ಆದ್ದರಿಂದ ತಮಗೆ ಅಭಿಮತವಾದ ಯಾವುದಾದರೂ ಒಂದು ಸಿದ್ಧಾಂತದಲ್ಲಿ ತಾವು ನನ್ನನ್ನು ನಿಲ್ಲಿಸಬೇಕು.

ಗುರು—ಆಯುಷ್ಮಂತನೇ, ಈ ವಿಷಯದಲ್ಲಿ ಸ್ವಮತದವರಲ್ಲಿ ಕಲಹವುಂಟಾದಾಗ, ಸಮಾನ ಶಾಸ್ತ್ರದಲ್ಲಿಯೇ ಸ್ಥಿರವಾಗಿ ನಿಂತು ವಾದಮಾಡಬೇಕು. ಇತರ ಸಿದ್ಧಾಂತಗಳನ್ನು ಅವಲಂಬಿಸಿದವರೊಂದಿಗೆ ಕಲಹವು ಪ್ರಾಪ್ತವಾದರೆ, ವೇದಾಂತ ಸಿದ್ಧಾಂತದಲ್ಲಿ ಲಕ್ಷ್ಯವಿಟ್ಟು ವಾದಮಾಡಬೇಕು. ಅದರೊಳಗೂ ವ್ಯಾಸ, ಪರಾಶರ, ಶುಕ, ಶೌನಕ, ಬೋಧಾಯನರೇ ಮೊದಲಾದವರಿಂದ ಪರಿಗ್ರಹಿಸಲ್ಪಟ್ಟ ಪದ್ಧತಿಯನ್ನಾಶ್ರಯಿಸಿ, ಪರಮಾರ್ಥಗಳನ್ನರಿತಿರುವ ಆಚಾರ್ಯ ಕಟಾಕ್ಷದಿಂದ ಪರಿಮಿತಗಳಾಗಿಯೂ, ವಿಸ್ತಾರಗಳಾಗಿಯೂ, ಗಂಭೀರಗಳಾಗಿಯೂ ಇರುವ ಐದಾರು

ಗ್ರಂಥಗಳು ನಮ್ಮಿಂದ ಮಾಡಲ್ಪಟ್ಟಿವೆ. ಅವುಗಳಲ್ಲಿ ಸಾವಧಾನದಿಂದ ಮನಸ್ಸಿಟ್ಟು, ಪರಮಾರ್ಥಗಳನ್ನು ತಿಳದುಕೊಂಡು, ಸಭಿಕರ ಮನಸ್ಸಿಗೆ ಒಪ್ಪುವಂತೆ ಪ್ರಮಾಣತರ್ಕಗಳನ್ನು ಉಪಯೋಗಿಸು.

ಶಿಷ್ಯ—ತಮ್ಮ ಅನುಗ್ರಹದಿಂದ ಎಲ್ಲಿಯೂ ನಾನು ಪ್ರಮಾದವನ್ನು ವಹಿಸುವುದಿಲ್ಲ. ಗುರುಕಟಾಕ್ಷದಿಂದ ಹೆಚ್ಚು ಗುಣಗಳನ್ನು ವಹಿಸಿರುವ ಮನಸ್ಸಿನಲ್ಲಿ ಒಂದಾವರ್ತಿ ಸ್ಫುರಿಸಿದ ಅರ್ಥವಿಶೇಷವು ಸ್ವಲ್ಪವೂ ವಿಸ್ಮೃತವಾಗದೆ, ಶಿಲಾಲಿಖಿತದಂತೆ ಸ್ಥಿರವಾಗಿ ನಿಲ್ಲುವುದು. ಹಾಗೆ ಆಚಾರ್ಯಾನುಗ್ರಹದಿಂದ ತೋರುವ ಅರ್ಥಕ್ಕೆ ಅರ್ಥಾಂತರವನ್ನು ಕಲ್ಪಿಸಿ ದೂಷಿಸುವವರು ಮನುಷ್ಯರಾಗಲೀ. ಋಷಿಗಳಾಗಲೀ ಅವರ ದೂಷಣೆಗಳು ಬಹುಧಾವಿಕಲ್ಪಿತಗಳಾಗಿ, ಆ ಕ್ಷಣದಲ್ಲಿಯೇ ನಷ್ಟವಾಗುವುವು.

ಗುರು—ಆಯುಷ್ಮಂತನೇ, ದುರ್ವಾದಿಗಳು ಉಪಯೋಗಿಸುವ ಕುಯುಕ್ತಿಗಳು ಜಗತ್ತನ್ನೇ ಮೋಹಗೊಳಿಸುವುವು. ಆ ಭಯದಿಂದ ನೀನು ಬಹಳ ಜಾಗರೂಕತೆಯಿಂದಿರಬೇಕೆಂದು ನಾನು ಒತ್ತಿ ಹೇಳುತ್ತೇನೆ. ಈ ವಾದದಲ್ಲಿ ವಕ್ರಬುದ್ಧಿಯುಳ್ಳವರು ಕಲ್ಪಿಸುವ ಯುಕ್ತಿಗಳು, ವಾದಗೋಷ್ಠಿಯಲ್ಲಿ ಧುರಂಧರರಾದವರಿಗೂ ಕೂಡ ಒಂದು ಕ್ಷಣ ಕಠಿನವಾಗುವುದು. ಆ ಯುಕ್ತಿಗಳಿಗೆ ಅನುಗುಣವಾದ ಅನೃತ ವಾದಾರ್ಥಗಳನ್ನು ಪ್ರಕಾಶಪಡಿಸುವ ಪ್ರಲಾಪಗಳು ಸ್ತ್ರೀಯರುಗಳ ಹೃದಯದಂತೆ ಕಠಿನಗಳಾಗಿ, ಬಹು ಭಯವನ್ನುಂಟುಮಾಡುವುವು.

ಶಿಷ್ಯ—ಪೂಜ್ಯರೇ, ನನ್ನಲ್ಲಿ ತಮಗಿರುವ ಅತಿ ಪ್ರೀತಿಯು ತಮಗಿಷ್ಟು ಸಂದೇಹವನ್ನುಂಟುಮಾಡಿರುವುದು. ತಾವು ಸರ್ವಾರ್ಥವನ್ನೂ ನನಗೆ ತಿಳಿಯಪಡಿಸೋಣವಾಗಿದೆ. ನಾನು ತಮ್ಮ ಆಜ್ಞಾಧಾರಕನಾಗಿ ನಿಂತಿರುವೆನು. ಹೀಗಿರುವಾಗ, ವಾದಿ ಎಂದು ಹೇಳಿಕೊಂಡು ಬರುವವನು ಯಾವನಿರುವನು ?

ಗುರು—ಆಯುಷ್ಮಂತನೇ, ಮತ್ತೊಂದನ್ನು ಜ್ಞಾಪಕವಿಡು.

ಶಿಷ್ಯ—ಅನುಗ್ರಹಿಸಬೇಕು.

ಗುರು—ಭಗವತ್ಪ್ರತಿಪಾದಕವಾದ ವೇದಾಂತಕ್ಕೆ ಪರಿಷ್ಕಾರರೂಪವಾದ ನಮ್ಮ ಭಾಷಣವು ಸಂಕ್ಷಿಪ್ತವಾಗಿಯೂ, (ವೇದಾಂತ ದೀಪ) ವಿಸ್ತಾರವಾಗಿಯೂ, (ಶ್ರೀಭಾಷ್ಯ) ಸರಳವಾದವರಿಗೆ ಯೋಗ್ಯವಾಗಿಯೂ, (ಗದ್ಯತ್ರಯ) ನಿಧಾನವಾಗಿ ನೋಡುವವರಿಗೆ ಪ್ರಿಯವಾಗಿಯೂ, (ಸಾರ) ಪ್ರಧಾನವಾಗಿ ನಿರ್ಮಿತವಾಗಿಯೂ, (ವೇದಾರ್ಥಸಂಗ್ರಹ) ಗೀತೆಗೆ ಅಲಂಕಾರವಾಗಿಯೂ, (ಗೀತಾಭಾಷ್ಯ) ಇರುವುದು. ಇವುಗಳಲ್ಲಿ ಪ್ರಮೇಯ, ಆರ್ಜವ, ಸೂತ್ರಸ್ವಾರಸ್ಯಾದಿಗಳಿಂದ ಬಹು ವಿಷಯಗಳು ಸುಲಭವಾಗಿ ತಿಳಿಯಬರುವುವು. ಆ ಶಿಕ್ಷಾಸೌಕರ್ಯದಿಂದ ಸಂತೋಷವು ಹೆಚ್ಚಿ; ಪ್ರಸನ್ನರಾದ ಗುರುಗಳ ಅನುಗ್ರಹವು ವಿಶೇಷವಾಗಿ ಪ್ರಕಾಶಮಾನವಾಗುವಕಾರಣ, ವಿದ್ವಾಂಸರುಗಳು ಬಹು ಶ್ರದ್ಧೆಯಿಂದ ಈ ನನ್ನ ಭಾಷಣಗಳನ್ನು ಸ್ವೀಕರಿಸುವರು.

ಶಿಷ್ಯ—ತಮ್ಮ ಶ್ರೀಸೂಕ್ತಿಗಳು ಉಪನಿಷತ್ತಿಗೆ ಆಧಾರಭೂತಗಳಾಗಿವೆ. ಕತ್ತಲೆಯಿಂದ ಕೂಡಿದ ರಾತ್ರಿಯಲ್ಲಿ ಎಣ್ಣೆಯನ್ನು ತುಂಬಿ ಉತ್ತಮ ದೆಸೆಯನ್ನು ಹೊಂದಿರುವ ದೀಪವು ಮನೆಗೆ ಬಂದವರನ್ನು ಸಂತೋಷಪಡಿಸುವಂತೆ ನಿರತಿಶಯ ಸ್ನೇಹದಿಂದ ಕೂಡಿ, ಉತ್ತಮ ದೆಸೆಯಲ್ಲಿ ವಿದ್ವಾಂಸರುಗಳಿಂದ ಅನುಸಂಧಾನ ಮಾಡುವುದಕ್ಕೆ ಅರ್ಹವಾಗಿ, ತಮ್ಮಿಂದ ನಿರ್ಮಿಸಲ್ಪಟ್ಟಿರುವ ಭಾಷ್ಯವು ಸಂಸಾರವೆಂಬ ಕಾರ್ಗತ್ತಲೆಯನ್ನು ಹೋಗಲಾಡಿಸಿ, ಶರಣಾಗತರನ್ನು ಸಂತೋಷಪಡಿಸುತ್ತಲಿರುವುದು. ಮತ್ತು ನೀವು ಉಪದೇಶಿಸಿರುವ ಶ್ರೀ ಭಾಷ್ಯಾದಿ ಶಾಸ್ತ್ರವನ್ನು ಪರಿಶೀಲನ ಮಾಡಿದರೆ, ಅಸದ್ಭಾವವು ನಾಶವಾಗುವುದು. ಭಗವಂತನ ಅನುಗ್ರಹವು ಉಂಟಾಗುವುದು, ಅಜ್ಞಾನವು ನಾಶವಾಗುವುದು, ತತ್ವಜ್ಞಾನವು ಲಭಿಸುವುದು, ಸುಖವು ಹೆಚ್ಚುವುದು, ಒಂದು ಸಲ ಕೇಳಿದ ಮಾತ್ರದಿಂದಲೇ ಅಮಾರ್ಗವನ್ನು ಬಿಡಿಸಿ, ಮೋಕ್ಷಮಾರ್ಗದಲ್ಲಿ ನಡೆಸುವುದರಲ್ಲಿ ಸಮರ್ಥವಾಗಿರುವುದು. ಆದರೂ ಬುದ್ಧಿಚಾಂಚಲ್ಯವುಳ್ಳ ನಾನು ಮರೆತುಹೋಗಿರುವ ಸ್ವಲ್ಪ ವಿಷಯವನ್ನು ಪ್ರಶ್ನೆಮಾಡುವೆನು.

ಗುರು—ಅದು ಯಾವುದು ?

ಶಿಷ್ಯ—ಭಗವಂತನು ಧರ್ಮವನ್ನು ಮಾತು, ಅಧರ್ಮದಲ್ಲಿ ಪ್ರವೇಶಿಸಬೇಡ ಎಂದು ಧರ್ಮಮಾರ್ಗವನ್ನು ಉಪದೇಶಿಸಿ, ತಾನೇ ಅದಕ್ಕೆ ವಿರುದ್ಧವಾಗಿ ಪಾಪಾಚರಣದಲ್ಲಿ ಜನರನ್ನು ಪ್ರೇರಿಸುತ್ತಾನಷ್ಟೆ. ಹೀಗಿರುವಾಗ ಅವನು ಹೇಗೆ ಆಪ್ತನು ?



ಗುರು—ಆಹಾ ! ಎಷ್ಟು ಸೂಕ್ಷ್ಮವಾದ ಪ್ರಶ್ನೆ !

ಶಿಷ್ಯ—ಅನೇಕ ಜನ್ಮಗಳಿಂದ ಮಾಡಿರುವ ಪಾಪಗಳು ಸಾಮಗ್ರಿಗಳ ವಶದಿಂದ ನಿವಾರಣ ಮಾತುವುದಕ್ಕೆ ಅಸಾಧ್ಯವಾಗಿರುವಾಗ 'ಪಾಪವನ್ನು ಮಾತಬೇಡ' ಎಂದು ಹೇಗೆ ಅಪ್ಪಣೆ ಕೊಡಿಸಿರುವನು ?

ಗುರು—ಇದು ಮತ್ತೂ ಅತಿ ಸೂಕ್ಷ್ಮವಾದ ಪ್ರಶ್ನೆಯಾಗಿದೆ.

ಶಿಷ್ಯ—ಭಗವಂತನು ತನ್ನ ಇಚ್ಛೆಯಿಂದ ತಾನೇ ಪಾಪಕೆಲಸಗಳನ್ನು ಮಾಡಿಸಿ, ತಾನೇ ಶಿಕ್ಷೆಯನ್ನು ಹೇಗೆ ವಿಧಿಸಿದನು ?

ಗುರು—ಆಯುಷ್ಮಂತನೇ, ಕರ್ಮೋಪಾಧಿಯು ಸಾವಧಿಕವಾಗಿರುವುದರಿಂದ ಈ ಮೂರರಲ್ಲಿಯೂ ಯಾವ ದೋಷವೂ ಇರುವುದಿಲ್ಲ. ಅಂದರೆ, ಈಶ್ವರನು ಚೇತನನಿಗೆ ಕರಣ ಕಳೇಬರಗಳನ್ನು ಕೊಟ್ಟ ಕಾಲದಲ್ಲಿ ಕರ್ತವ್ಯ ಶಕ್ತಿಯನ್ನೂ ಸಹ ಕೊಡುತ್ತಾನೆ. ಹಾಗೆ ಅವನು ಕೊಟ್ಟ ಕರ್ತವ್ಯ ಶಕ್ತಿಯಿಂದ ಮನುಷ್ಯನು ಜ್ಞಾನ, ಚಿಕೀರ್ಷೆ, ಪ್ರಯತ್ನ ಇವುಗಳನ್ನು ಮಾಡುತ್ತಾನೆ. ಈಶ್ವರನೂ ಕೂಡ ಅವರವರ ಪೂರ್ವಕರ್ಮಗಳಿಗೆ ಅನುಸಾರವಾಗಿ ಪಾಪಗಳ ವಿಷಯದಲ್ಲಿ ಉಪೇಕ್ಷೆಯನ್ನೂ, ಪುಣ್ಯಕೆಲಸಗಳ ವಿಷಯದಲ್ಲಿ ಸಮ್ಮತಿಯನ್ನೂ ವಹಿಸಿ, ನಿಗ್ರಹಾನುಗ್ರಹಗಳನ್ನು ಮಾಡುತ್ತಾನೆ. ಆದ್ದರಿಂದ ಈ ನಿಗ್ರಹದಿಂದ ಇವನ ಪಾಪಪರಿಹಾರವೂ, ಅನುಗ್ರಹದಿಂದ ಸುಖವೂ ಉಂಟಾಗುವುದರಿಂದ ಹಾಗೆ ನೇಮಿಸುವುದು ನ್ಯಾಯವಾಗಿಯೇ ಇರುವುದು. ಎರಡನೇ ಪ್ರಶ್ನೆಯ ವಿಷಯದಲ್ಲಿ ಪೂರ್ವಾರ್ಜಿತ ಪಾಪಗಳ ವಿಷಯದಲ್ಲಿ ಇಷ್ಟು ಕಾಲಗಳವರೆಗೆ ಇದರ ಫಲವನ್ನು ಅನುಭವಿಸಬೇಕೆಂಬ ಒಂದು ಅವಧಿಯು ನಿಶ್ಚಿತವಾಗಿರುವುದರಿಂದ ಹಿಂದಿನ ಪಾಪಗಳೆಲ್ಲವೂ ಅನುಭವಿಸಿ ಮುಗಿಯುವ ಅವಧಿಯಲ್ಲಿ ಪಾಪವಾ

ತಬೇಡನೆಂದು ಹೇಳಿದರೆ, ಪಾಪಕೆಲಸದಿಂದ ನಿವೃತ್ತಿಯು ಸಂಭವಿಸ
ಬಹುದಾದ್ದರಿಂದ, ಪಾಪಮಾಡಬೇಡನೆಂಬ ಅನುಶಾಸನವು ಸರಿಯಾಗಿ
ಯೇ ಇದೆ. ಮೂರನೇ ಪ್ರಶ್ನೆಯ ವಿಷಯದಲ್ಲಿ ಈಶ್ವರೇಚ್ಛೆಯು ಪೂ
ರ್ವಕೃತವಾದ ಕರ್ಮವನ್ನು ಅನುಸರಿಸಿಯೇ ಪ್ರವರ್ತಿಸುವುದರಿಂದ,
ದಂಡವಿಧಾನವೂ ಕೂಡ ಉಚಿತವಾಗಿಯೇ ಇರುವುದು.

ಶಿಷ್ಯ—(ಬಹಳ ಸಂತೋಷದಿಂದ) ತಮ್ಮ ಈ ಸೂಕ್ತಿಯು ಮಿತವಾಗಿ
ಯೂ, ಗಹನವಾಗಿಯೂ, ಗಂಭೀರವಾಗಿಯೂ, ಸೂಕ್ಷ್ಮಬುದ್ಧಿಯುಳ್ಳ
ವರಿಂದ ತಿಳಿದುಕೊಳ್ಳುವುದಕ್ಕೆ ಅರ್ಹವಾಗಿಯೂ ಇರುವುದು. ಇದ
ನ್ನೇ ಸಭಾಸದರಿಗೆಲ್ಲಾ ತಿಳಿಸುವೆನು. ಆಧುನಿಕರಾದ ಕುಟಿಲಬುದ್ಧಿ
ಯುಳ್ಳವರ ಮದವನ್ನು ಮೂಲೋತ್ಪಾಟನ ಮಾಡುವುದರಲ್ಲಿ ಈ ಯ
ತಿಶ್ರೇಷ್ಠರ ವಚನಗಳು ಸಮರ್ಥಗಳಾಗಿವೆ. ಮೃಷಾಮತವೆಂಬ ವಿ
ಷದ ಬೇಗೆಯಿಂದ ಬೆಂದಿರುವ ಜೀವರುಗಳಿಗೆ ಜೀವನೌಷಧವಾಗಿವೆ.
ಉಪನಿಷತ್ತುಗಳಿಗೆ ಅಲಂಕಾರಗಳಾಗಿವೆ. ಮೋಕ್ಷವನ್ನು ಕೊಡು
ತ್ತವೆ. ಮತ್ತು ನಮ್ಮ ಈ ಯತಿರಾಜರ ಗ್ರಂಥವನ್ನು ಅನುಸಂಧಾ
ನಮಾಡುವವರ ಮುಂದೆ ಅಲ್ಲಿ ಇಲ್ಲಿ ಇರುವ ವಿಷಯಗಳನ್ನು ಆರಿಸಿ
ತಂದು ಗಂಟುಹಾಕಿರುವ, ಅರ್ಥಜ್ಞಾನವನ್ನುಂಟುಮಾಡದೆ, ಚಿಂತಾ
ಮಾತ್ರಪರ್ಯವ್ಯವಸಾಯಿಗಳಾಗಿರುವ, ಇತರ ಸಿದ್ಧಾಂತಗಳು ಶೋಭಿಸು
ವುದಿಲ್ಲ. ದಿವ್ಯವಾದ ಗಂಗೆಯನ್ನು ತಲೆಯಲ್ಲಿ ಧರಿಸಿರುವ ರುದ್ರದೇವ
ನು ಕಪ್ಪೆಗಳಿಂದ ಕೂಡಿದ ಕಾಲುವೆಗಳನ್ನು ನದಿಯೆಂದು ಒಪ್ಪುವನೇ?

(ಗುರುಗಳನ್ನು ನೋಡಿ)

ಪೂಜ್ಯರೇ, ಈ ಸಭೆಯ ಪಕ್ಕದಲ್ಲಿರುವ ಕೆಲವರು ಅಸಂಖ್ಯವಾದ ಅ
ನೇಕ ಮತಗಳಿಂದ ವ್ಯಾಪ್ತವಾಗಿರುವ ಈ ಜಗತ್ತಿನಲ್ಲಿ ನಿಮ್ಮ ಮತ
ವನ್ನು ಆಶ್ರಯಿಸಿರುವವರ ಸಂಖ್ಯೆಯು ಅತ್ಯಲ್ಪವಾಗಿರುವುದೆಂದು ಹೇ
ಳುವರು. ಅವರಿಗೆ ಉತ್ತರ ಕೊಡುವೆನು. (ಪಕ್ಕಕ್ಕೆ ತಿರುಗಿ) ಎ
ಲೈ ದೇವಾನಾಂಪ್ರಿಯರುಗಳಿರಾ, ದುರ್ಬುದ್ಧಿಯುಳ್ಳ ಜನಗಳಿಂದ ಮಾ
ಡಲ್ಪಟ್ಟಿರುವ ಗ್ರಂಥಗಳಿಂದ ಬಹಳ ಮತಗಳು ಉಂಟಾಗಿ, ಅದ
ರಲ್ಲಿ ಮನಸ್ಸಿಟ್ಟವರು, ಈ ಮತದವರು ಅಲ್ಪ ಸಂಖ್ಯೆಯುಳ್ಳವರಾದ

ಕಾರಣ, ಈ ಮತವು ಸರಿಯಾದುದಲ್ಲವೆಂದು ಹೇಳುವರು. ಮಹತ್ತರವಾದವಾಗಲಿ, ಅಲ್ಪವಾದದ್ದಾಗಲಿ, ಒಳ್ಳೆಯದಕ್ಕೂ, ಕೆಟ್ಟದಕ್ಕೂ ಕಾರಣವಲ್ಲವು. ಕೌಸ್ತುಭಮಣಿಯು ಅಲ್ಪವಾಗಿದ್ದಾಗ್ಯೂ, ನಾರಾಯಣನ ವಕ್ಷಸ್ಥಳವನ್ನು ಅಲಂಕರಿಸುವುದು. ಇದರ ಸಾಮ್ಯವು ದೊಡ್ಡದಾದ ಕುಲಪರ್ವತಕ್ಕೆ ಬರುವುದೇ ? ಅಥವಾ ವೇದಾಂತವನ್ನು ಸ್ಥಿರಪಡಿಸಿರುವ ಯತಿವರರ ವಚನಗಳನ್ನು ಮತಾಂತರದವರ ವಾಕ್ಯಗಳಿಂದ ಮದಿಸಿದ ಜನಗಳು ತಿರಸ್ಕಾರ ಮಾಡಿದರೂ, ಪುರಸ್ಕಾರ ಮಾಡಿದರೂ ವಚನಗಳಿಗೇನೂ ದೋಷವಿರುವುದಿಲ್ಲವು. ದಿವ್ಯವಾದ ಪರಿಮಳದಿಂದ ಪಟ್ಟಣವೇ ಶ್ಲಾಘಿಸುವಂತಿರುವ ಕರ್ಪೂರದ ಬೆಲೆಯನ್ನು ಉಪ್ಪಿನ ವ್ಯಾಪಾರಿಯು ಹೇಗೆ ತಿಳಿಯುವನು ?

(ಗುರುಗಳನ್ನು ಕುರಿತು)

ಪೂಜ್ಯರೇ, ಸರ್ವೇಶ್ವರನಿಂದ ಆರಂಭಿಸಿ, ಅನಾದಿಯಾಗಿ ಪ್ರಚರಿತವಾಗಿರುವ ಈ ಮತವನ್ನು ಹೊಸ ಮತವೆಂದು ಕೆಲವರು ಆಕ್ಷೇಪಿಸುವರು.

ಒಬ್ಬನು ಈ ದಿವಸದಲ್ಲಿ ಆಲೋಚಿಸಿ, ಒಂದು ವಿಧವಾಗಿ ತಿಳಿಯುವನು. ಮರುದಿನದಲ್ಲಿಯೇ ಅದಕ್ಕೆ ವಿರುದ್ಧವಾಗಿ ಕಾರಣಾಂತರಗಳಿಂದ ಅದೇ ವಿಷಯವನ್ನು ಮತ್ತೊಂದು ವಿಧವಾಗಿ ತಿಳಿಯುವನು. ಈ ವಿಧವಾದ ಅವನ ಎರಡು ಜ್ಞಾನಗಳನ್ನೂ ಕೆಲಕೆಲವರು ಗ್ರಹಿಸುವರು. ಇದು ಎರಡೂ ಕೂಡ ಪ್ರಮಾಣವಾದದ್ದೆಂದು ವಿವೇಕಿಗಳು ಹೇಳಲಾರರು. ಈ ಎರಡರಲ್ಲಿ ಒಂದನ್ನು ಬಿಟ್ಟು ಒಂದನ್ನ ಪರಿಗ್ರಹಿಸುವುದರಲ್ಲಿ ವ್ಯವಸ್ಥೆಯಾಗಲಿ, ಸಿದ್ಧಿಯಾಗಲಿ ಉಂಟಾಗುವುದಿಲ್ಲ. ಒಂದು ವೇಳೆ ಬಾಧಿತವನ್ನೇ ಪರಿಗ್ರಹಿಸುವನು. ಇದನ್ನೇ ಪರಿಗ್ರಹಿಸಬೇಕೆಂಬ ನಿಯಮವೇನೂ ಇರುವುದಿಲ್ಲ. ಆದ್ದರಿಂದ ಅಬಾಧಿತವಾದ ಅರ್ಥವುಳ್ಳ ಜ್ಞಾನವು ಹೊಸದಾಗಲೀ, ಹಳೆಯದಾಗಲೀ ಬುದ್ಧಿಶಾಲಿಗಳು ಅದನ್ನೇ ಪರಿಗ್ರಹಿಸುವರು. ಮತ್ತು ಹಳೆಯದಾಗಿರುವುದನ್ನೇ ಸಾಧುವಾದುದೆಂದು ಪರಿಗ್ರಹಿಸುವುದಾದರೆ, ಆ ಹಳೆಯದೂ ಕೂಡ ಅದನ್ನು ಕಲ್ಪಿಸಿದ ಕಾಲದಲ್ಲಿ ಹೊಸದೇ ಅಲ್ಲವೇ ? ಹೊಸದೂ ಕೂಡ ಕೆಲವು ಕಾಲದ ಅನಂತರದಲ್ಲಿ ಹಳೆಯದೇ ಆಗುವುದು. ಆ

ದ್ದರಿಂದ ಹೊಸದು, ಹಳೆಯದು ಎಂಬುವುದರಿಂದ ಗುಣವಾಗಲಿ, ದೋಷವಾಗಲಿ ಎರಡೂ ಕಂಡುಬರುವುದಿಲ್ಲವು.

ಗುರು—ಈ ಕ್ಷುದ್ರರಿಂದೇನು ? ಇದು ಕೇವಲ ಶಾಸ್ತ್ರವಿಷಯವಾದದ್ದು. ಇದು ಹಾಗಿರಲಿ. ಶಾಸ್ತ್ರಾರ್ಥ ವಿಷಯದಲ್ಲಿ ದೋಷವನ್ನು ಹೇಳುವ ವಾದಿಗಳಿಗೆ ಉತ್ತರವನ್ನು ಹೇಳಬೇಕು.

ಶಿಷ್ಯ—ಪೂಜ್ಯರೇ, ದೋಷ ವಾಸನೆಯೂ ಇಲ್ಲದ ನಿಮ್ಮ ಮತದಲ್ಲಿ ಅರ್ಥಗತವಾದ ದೋಷವು ಸ್ವಪ್ನದಲ್ಲಿಯೂ ಊಹಿಸಲು ಸಾಧ್ಯವಿಲ್ಲ. ಈ ನಿಮ್ಮ ಮತವು ಉಪನಿಷತ್ತುಗಳಿಗೆ ಬಹುಮತವಾಗಿರುವುದು. ಇದರಲ್ಲಿ ದೋಷಗಳನ್ನು ಹೇಳಬೇಕಾದರೆ, ಹಾಗೆ ಹೇಳುವವರು ತಮ್ಮ ಪಕ್ಷದಲ್ಲಿರುವ ದೋಷಗಳನ್ನೇ ಆರೋಪಿಸಬೇಕು. ಹಾಗೆ ಆರೋಪಿಸುವುದಾದರೆ, ಅದರಿಂದ ಈ ಮತಕ್ಕೆ ಹಾನಿಯೇನು ? ನಿರ್ಮಲವಾದ ಆಕಾಶವನ್ನು ಕಲುಷಿತವನ್ನಾಗಿ ಮಾಡಬೇಕೆಂದು ಕೆಸರನ್ನು ಕೈಯಿಂದ ಎತ್ತಿ ಆಕಾಶಕ್ಕೆ ಎಸೆದರೆ, ಆ ಕೆಸರು ಇವನ ಮೇಲೆಯೇ ಬೀಳುತ್ತದೆಯೇ ಹೊರತು, ಆಕಾಶವು ಕಲುಷಿತವಾಗುವುದೇ ? ತಮ್ಮ ಸಿದ್ಧಾಂತವು ಯಾರಿಂದಲೂ ಭೇದಿಸುವುದಕ್ಕಾಗುವುದಿಲ್ಲ. ಇದರ ವಿಷಯದಲ್ಲಿ ಪ್ರತಿಯಾಗಿ ವಾದಮಾಡುವುದಕ್ಕೆ ಪ್ರಾರಂಭಿಸುವವರು ವ್ಯರ್ಥಪ್ರಲಾಪವುಳ್ಳವರಾಗಿ ಮೂರ್ಖರಾಗುವರು. ನಾವು ಕಣ್ಣು ಮುಚ್ಚಿಕೊಂಡರೆ ಸೂರ್ಯನು ತಿರಸ್ಕೃತನಾಗುವನೇ ? ಕೋಗಿಲೆಯ ಧ್ವನಿಯನ್ನು ಕೇಳುವುದಕ್ಕೆ ಇಷ್ಟವಿಲ್ಲದೆ ಕಿವಿಯನ್ನು ಮುಚ್ಚಿಕೊಂಡರೆ, ಕೋಗಿಲೆಯು ಕಾಗೆಯಾದೀತೇ ? ಭೂಮಿಯನ್ನು ತಿರುಗಿಸುವೆನೆಂದು ತಾನು ಸುಮ್ಮನೇ ತಿರುಗಿದರೆ ಭೂಮಿಯು ತಿರುಗುವುದೇ ? ಕೈಮುಷ್ಟಿಯಿಂದ ಆಕಾಶವನ್ನು ಗುದ್ದಿದರೆ, ಆಕಾಶಕ್ಕೆ ನೋವಾಗುವುದೇ ?

ಗುರು—ಸೌಮ್ಯನೇ, ಸತ್ಯವಾಗಿಯೂ, ಪ್ರಿಯವಾಗಿಯೂ ಮಾತನಾಡಿದೆ. ಈಗ ನೀನು ಸರ್ವ ವಾದಿಗಳನ್ನೂ ಜಯಿಸುವುದಕ್ಕೆ ಉದ್ಯುಕ್ತನಾಗಿರುತ್ತೀಯೆ. ಇದಕ್ಕೆ ತಕ್ಕ ಸಭಾಪತಿಯನ್ನೂ, ಸಭ್ಯರನ್ನೂ ವಿಚಾರಮಾಡಬೇಕಾಗಿದೆ. (ಹಾಗೆಯೇ ಯೋಚನೆ ಮಾಡುವರು.)

ರಾಜ—ಸೇನಾಪತಿಯೇ, ಸಮೀಪಕ್ಕೆ ಹೋಗುವುದಕ್ಕೆ ಇದು ಸಮಯ ವಾಗಿರುವುದು.

ಸೇನಾಪತಿ—ನನ್ನ ಅಭಿಪ್ರಾಯವೂ ಅದೇನೇ. (ಇಬ್ಬರೂ ಸಮೀಪಕ್ಕೆ ಹೋಗುವರು.)

ಶಿಷ್ಯ—(ತಿರುಗಿ ನೋಡಿ ಸಂತೋಷದಿಂದಲೂ, ಬಹುಮಾನದಿಂದಲೂ) ಕಾಲಕ್ಕೆ ಸರಿಯಾಗಿ ವ್ಯವಸಾಯದಿಂದ ಕೂಡಿದ ವಿವೇಕನು ಬಿಸಲಿನಿಂದ ಕೂಡಿದ ಸೂರ್ಯನಂತೆ ಉದಯಿಸಿದನು. ಇವನು ಉದಯಿಸಿದ ಒಡನೆ ಎಚ್ಚರವನ್ನು ತಪ್ಪಿಸುವ ರಾತ್ರಿಯನ್ನು ಸೂರ್ಯನು ಹೋಗಲಾಡಿಸುವಂತೆ, ನಿಶ್ಚಯ ಜ್ಞಾನವನ್ನು ಲೋಪಮಾಡುವ ಸಂಶಯವನ್ನು ಹೋಗಲಾಡಿಸುವನು. ಈ ವಿವೇಕನ ಸೇನಾಪತಿಯಾದ ವ್ಯವಸಾಯನೂ ಕೂಡ ಗುಣಶ್ರೇಷ್ಠನಾಗಿ, ವಿವಾದವನ್ನು ನಿರ್ಣಯಿಸುವುದಕ್ಕೆ ನಿಲ್ಲುವ ವಿದ್ವಾಂಸರುಗಳೊಂದಿಗೆ ತನ್ನ ಅಭಿಪ್ರಾಯವನ್ನು ಪ್ರಕಾಶಪಡಿಸುತ್ತಾ ನಿಲ್ಲುವನು.

ರಾಜ—(ವಿನಯದಿಂದ) ಸೇನಾಪತಿಯಿಂದ ಒಡಗೂಡಿದ ವಿವೇಕನು ಪೂಜ್ಯರಾದ ತಮ್ಮ ಉಚಿತೋಪಚಾರಗಳಿಗೆ ಸಿದ್ಧನಾಗಿರುವನು.

ಗುರು—ಮಹಾರಾಜನೇ, ಸರ್ವತ್ರ ಕುಶಲಿಯಾಗು. ಶಾಕ್ಯ, ಕಾಣಾದ, ನೈಯಾಯಿಕ, ಜೈನ, ಚಾರ್ವಾಕ, ಮೊದಲಾದ ಮತದವರುಗಳೂ, ವೇದವಿಚಾರವೆಂಬ ಕವಚವನ್ನು ತೊಟ್ಟು, ಗೋಮುಖ ವ್ಯಾಘ್ರದಂತೆ ಸಂಗೊಳಿಸುವ ಮತದವರೂ, ಸಹ ಬಹು ಪ್ರಕಾರವಾಗಿ ವೇದಕ್ಕೆ ತೊಂದರೆಯನ್ನು ಉಂಟುಮಾಡಿದಾಗ್ಯೂ, ಆಯಾಯ ಕಾಲಗಳಲ್ಲಿ ಬಾದರಾಯಣ, ದತ್ತಾತ್ರೇಯ ಮೊದಲಾದ ರೂಪಗಳಿಂದ ಭಗವಂತನು ಅವತರಿಸಿ, ಚಿದಚಿದೀಶ್ವರ ತತ್ವವಿವೇಕವನ್ನು ಅಕ್ಷತವಾಗಿರುವಂತೆ ಕಾಪಾಡಿ, ವೇದದ ಪರಿಭವಗಳೆಲ್ಲವನ್ನೂ ಪರಿಹರಿಸಿ ನಿನ್ನನ್ನು ಕಾಪಾಡುತ್ತಿರುವನು.

ರಾಜ—ಪೂಜ್ಯರೇ, ಈ ದಿವಸ ತಮ್ಮ ದರ್ಶನ ಮಾತ್ರದಿಂದಲೇ ಸಮಸ್ತ ಮಂಗಳವನ್ನೂ ಹೊಂದಿರುವ ನಮಗೆ ಈ ತಮ್ಮ ಆಶೀರ್ವಾದವು ಅಧಿಕವಾಗಿರುವುದು.

ಗುರು—ರಾಜನೇ, ವಿಚಾರ ಮಾಡುವ ಕಾಲಕ್ಕೆ ಸರಿಯಾಗಿ ಸುಕೃತಕ
ಪಾಕದಿಂದ ಸೇನಾಪತಿಯೊಂದಿಗೆ ಸನ್ನಿಹಿತನಾಗಿರುವಿ. ಆದಕಾರ
ನೀನು ಸಭಾಪತಿಯಾಗಿ ನಿಂತು, ಈ ಶಿಷ್ಯನಿಗೆ ಇಷ್ಟಾರ್ಥವನ್ನು
ವೇರಿಸುವುದಕ್ಕೆ ಆಜ್ಞಾಪಿಸು.

ರಾಜ—ಈ ವಿಷಯದಲ್ಲಿ ತಮ್ಮ ಅಭಿಪ್ರಾಯದಂತೆ ಆಜ್ಞಾಪಿಸುವೆ
(ಶಿಷ್ಯನನ್ನು ನೋಡಿ) ಸೌಮ್ಯನೇ, ಬ್ರಾಹ್ಮಣೋತ್ತಮನೇ, ಸ
ಜ್ಞರಾದ, ಪೂಜ್ಯರಾದ ಗುರುಗಳನ್ನು ಶಾಸ್ತ್ರಾನುಸಾರವಾಗಿ ಸೇ
ದ್ದೀಯೆ. ಈ ನಿಮ್ಮಿಬ್ಬರಲ್ಲಿ ನಿಮ್ಮ ಗುರುಗಳು ಸಾಕ್ಷಾತ್ ವೇ
ತಸಿದ್ಧಾಂತವೇ ಆಗಿರುವರು. ನೀನು ಅಧಿಕವಾಗಿ ವಾದಮಾಡುವ
ಪ್ರಭುವಾದ ವಾದಸ್ವರೂಪನೇ ಆಗಿರುವಿ ಎಂದು ನಾನು ತಿಳಿಯುತ್ತೇ
ಇದನ್ನು ಮೊದಲು ನೀನು ಜಾಗರೂಕತೆಯಿಂದ ಅನುಸರಿಸಬೇ

ಶಿಷ್ಯ—ಮಹಾರಾಜನೇ, ಆಜ್ಞಾಪಿಸಬಹುದು.

ರಾಜ—ಸಾತ್ವಿಕರಾದವರನ್ನು ವಿನಯದಿಂದ ಸೇವಿಸು. ಸದಾಚ
ನಿರತನಾಗಿ, ಸಾಧುಗಳ ವೃತ್ತಿಯನ್ನು ನೆಲೆಗೊಳಿಸು. ಬ್ರ
ಗಳ ವಿಷಯದಲ್ಲಿ ಸಂಭವಿಸಬಹುದಾದ ಅಪರಾಧಗಳಿಗೆ ಹೆದರು
ರ್ಥಕಾಮಗಳಲ್ಲಿ ಮಾತ್ರವೇ ನಿರತರಾಗಿರುವವರನ್ನು ಹುಲ್ಲಿ
ಕಡೆಯಾಗಿ ಭಾವಿಸು. ಸರ್ವಾಪರಾಧವನ್ನೂ ಸಹಿಸುವ
ನಾರಾಯಣನಲ್ಲಿ ಆತ್ಮರಕ್ಷಾಭರವನ್ನು ಇರಿಸಿ, ಮೇಘವನ್ನೆ
ತ್ತಿರುವ ಚಾತಕದಂತೆ ಸ್ವಾಭೀಷ್ಟದಲ್ಲಿ ಭಗವತ್ಕೃಪೆಯನ್ನೆ
ಸುತ್ತಿರು.

ಶಿಷ್ಯ—ಇನ್ನೇನಾದರೂ ತಿಳಿಯತಕ್ಕದ್ದುಂಟೋ ?

ರಾಜ—ಉಪನಿಷತ್ತುಗಳನ್ನು ಪರಿಶೀಲನ ಮಾಡು. ವೇ
ತಕ್ಕೆ ಬಾಹ್ಯರಾದ ಜನಗಳೊಂದಿಗೆ ಸಹವಾಸವನ್ನು ಬಿಡು.
ನ್ನು ನಿಯಮದಿಂದ ಆರಾಧಿಸು. ವಿರೋಧಿಗಳನ್ನು ನಿಗ್ರಹಿಸು.

ಗುರು—ಆಯುಷ್ಮಂತನೇ ಚೆನ್ನಾಗಿ ಕೇಳು.

ಶಿಷ್ಯ—ಮಹಾಪ್ರಸಾದ.

